ಶಾರದಾ ಗ್ರಂಥಮಾಲೆಯ ಚತುರ್ಥ ಕುಸುಮ

# ಇಂದಿರೆ

## (ಅಥವಾ ನಿರ್ಭಾಗ್ಯವನಿತೆ)

---


ಪ್ರಿಯಂವದೆ, ಸ್ನೇಹಲತೆ, ನಿರ್ಮಲೆ, ಹಿಂದೂ ಭಾಗ್ಯೋದಯ

ರಣಕೇಸರಿ ಮೊದಲಾದ ಗ್ರಂಥಗಳ ಕರ್ತೃರೂ

"ಸರಸ್ವತಿ" ಮಾಸಪತ್ರಿಕೆಯ ಸಂಪಾದಕರೂ ಆದ

**ಆರ್. ಕಲ್ಯಾಣಮ್ಮ**

ಇವರಿಂದ ರಚಿತವಾದದ್ದು


---


ದ್ವಿತೀಯ ಮುದ್ರಣ ೧,೫೦೦ ಕಾಪಿಗಳು





PRINTED BY

B SREENIVASA IYENGAR

BANGALORE CITY

1924





ಕ್ರಯ 12 ಆಣೆ. ಟಪ್ಪಾಲು ಹಾಸಲು ಬೇರೆ

# ಸಮರ್ಪಣೆ.

---

"**ಪುರಾತನ ಪದ್ಧತಿ**" ಯೆನ್ನುವ ದುಷ್ಟಪಿಶಾಚಕ್ಕೆ ಸಿಲು "**ಬಾಲ್ಯವಿವಾಹ**" ವೆನ್ನುವ ಕಟ್ಟಿಗೊಳಪಟ್ಟು "**ವಿಧವಾವಸ್ಥೆ**" ಯೆನ್ನುವ ದುಃಖಸಾಗರದಲ್ಲಿ ಮುಳುಗಿ ದಡವನ್ನು ಕಾಣದೆ ಪರಿತಪಿಸುತ್ತಲಿರುವ ನನ್ನ ಲಕ್ಷೋಪಲಕ್ಷ ಸಹೋದರಿಯರಿಗೆ ಹೃದ್ರಾವಕವೂ ದುಃಖಭರಿತವೂ ಆದ ಈ ಪುಸ್ತಕವನ್ನು ತದ್ದುಃಖಶಮನಾರ್ಥವಾಗಿ ಸಹೋದರೀವಾತ್ಸಲ್ಯದಿಂದ ವಿಶ್ವಾಸಪೂರ್ವಕವಾಗಿ ಸಮರ್ಪಿಸಿರುವೆನು.

---

# ವಿಷಯಾನುಕ್ರಮಣಿಕೆ.

# ಪೀಠಿಕೆ.

---

ಪೂರ್ವದಲ್ಲಿ ಹರಿಶ್ಚಂದ್ರ, ನಳನೇ ಮೊದಲಾದ ಷೋಡಶಮಹಾರಾಜರುಗಳಿಂದಲೂ, ಮನು, ಮಾಂಧಾತ ಮೊದಲಾದ ಷಟ್ಚಕ್ರವರ್ತಿಗಳಿಂದಲೂ, ವಸಿಷ್ಠ, ವಿಶ್ವಾಮಿತ್ರ ಮೊದಲಾದ ಸಪ್ತ ಋಷಿಗಳಿಂದಲೂ ರಾರಾಜಿಸುತ್ತಿದ್ದ ನಮ್ಮ ಪುಣ್ಯಭೂಮಿಯಾದ ಭಾರತವರ್ಷವು ಈಗ ಬಾಲವಿಧವೆಯರ ಕಣ್ಣೀರಿನ ಪ್ರವಾಹಕ್ಕೆ ಸಿಕ್ಕಿ ದಡವನ್ನು ಕಾಣದೆ ಪರಿತಪಿಸುತ್ತಲಿರುವುದಲ್ಲದೆ ಬಾಲ್ಯವಿವಾಹವೇ ಮೊದಲಾದ ಅನೇಕ ಪ್ರಾಚೀನ ವಿಧಿಗಳಿಗೆ ಸಿಕ್ಕಿ ಪೇಚಾಡುತ್ತಲಿರುವುದು. ಸಾವಿರಾರು ವರ್ಷಗಳ ಹಿಂದೆ ಆಗಿನ ಕಾಲಕ್ಕೆ ತಕ್ಕಂತೆ ಆಚರಿಸುತ್ತಿದ್ದ ನಿಯಮಗಳನ್ನೇ ಪ್ರಾಧಾನ್ಯವಾಗಿಟ್ಟುಕೊಂಡು ಈಗಿನವರು ವಿಲವಾಗುತ್ತಲಿರುವರು. ಕನ್ಯೆಯರು ಎಂಟು ವರ್ಷದೊಳಗೆ ವಿವಾಹಿತರಾಗುವುದೂ, ವಿವಾಹವಾದ ಕೂಡಲೇ ದುರಾದೃಷ್ಟವಶದಿಂದ ಕೂಡಲೇ ವಿಧವೆಯಾದರೂ ಆಮರಣ ಪರ್ಯಂತವೂ ದುಃಖಸಮುದ್ರದಲ್ಲಿ ಮುಳುಗಿ ದಡವನ್ನು ಕಾಣದೆ ಪರಿತಪಿಸುವುದೂ ಭಾರತೀಯ ನಿರ್ಭಾಗ್ಯವಿತಂತುಗಳ ಶೋಚನೀಯವಾದ ದುಃಸ್ಥಿತಿಯಾಗಿದೆ. ಇವರಗೋಸ್ಕರ ಎಷ್ಟೋ ಕಲಾ ಶಾಲೆಗಳೂ ವಿದ್ಯಾಭವನಗಳೂ ಸ್ಥಾಪಿಸಲ್ಪಟ್ಟಿದ್ದರೂ ನಾಗರಿಕತೆಯ ಬೆಳಕನ್ನು ಕಾಣದ ಅನೇಕ ಕಡೆಗಳಲ್ಲಿ ವಿಧವೆಯರು ಅನುಭವಿಸುತ್ತಲಿರುವ ದುರವಸ್ಥೆಯನ್ನು ನೋಡಿದ ಮಾತ್ರದಲ್ಲಿ ಎಂತಹ ಕಲ್ಲೆದೆಯ ಕಟುಕನ ಹೃದಯವೂ ಕೂಡ ಕರಗಿ ನೀರಾಗದಿರಲಾರದು. ಸಾಧಾರಣವಾಗಿ ನಮ್ಮ ದೇಶದಲ್ಲಿರುವ ವಿಧವೆಯರನ್ನೆಲ್ಲ ಒಟ್ಟುಗೂಡಿಸಿ ನೋಡಿದರೆ ಸುಮಾರು ಐವತ್ತು ಸಾವಿರಕ್ಕೆ ಹೆಚ್ಚಾಗಿರಬಹುದು. “ಸಾಧ್ವಿಯೊಬ್ಬಳ ಕಣ್ಣಿನಿಂದ ಒಂದು ತೊಟ್ಟು ನೀರು ಭೂಮಿಗೆ ಬಿದ್ದ ಮಾತ್ರದಲ್ಲಿ ಆಕುಟುಂಬವೇ ವಿಲವಾಗುವುದೆಂದು” ಪರಿತಾಪದಿಂದ ಹೇಳುತ್ತಿರುವ ಮಹನೀಯರು ಸಾವಿರಾರು ಸಾಧ್ವಿಯರ ಕಣ್ಣಿನಿಂದ ಅಶ್ರುಪ್ರವಾಹವು ಹರಿಯುತ್ತಿದ್ದರೂ ನೋಡಿಕೊಂಡು ಸುಮ್ಮನಿರುವರೇಕೆ ? ಅನೇಕ ಕಡೆಗಳಲ್ಲಿರುವ ವಿಧವೆಯರು ಯಾವಕಾರ್ಯಕ್ಕೂ ಅನರ್ಹರಾಗಿ ಸದಾ ಸರ್ವಕಾ

ಇನ್ನೂ ಚಿಂತಾಬ್ಧಿಯಲ್ಲಿ ಮುಳುಗಿ ತಮ್ಮ ಜೀವನವು ಈ ಭೂಮಾತೆಗೊಂದು ಭಾರವಾಗಿರುವುದೆಂದು ಭಾವಿಸಿ ತಮ್ಮ ಮರಣಕಾಲಕ್ಕೆ ಮೃತ್ಯುದೇವತೆಗೆ ಸುಖಾಗಮನವನ್ನು ಕೋರುತ್ತಾ "ಇಂದು ಕಳೆಯಿತೇ ? ಬೆಳಗಾಯಿತೇ ? ರಾತ್ರಿಯಾಯಿತೇ" ಎಂದು ದಿನವನ್ನು ಅತಿ ಕಷ್ಟದಿಂದ ಕಳೆಯುತ್ತಿರುವುದನ್ನು ನಮ್ಮಲ್ಲನೇಕರು ಪ್ರತ್ಯಕ್ಷವಾಗಿ ನೋಡಿರುವರಾದ್ದರಿಂದ ಹೃದ್ರಾವಕವಾದ ಈ ದೃಶ್ಯವನ್ನು ನಾನಿಲ್ಲಿ ವರ್ಣಿಸಬೇಕಾಗಿಲ್ಲ. ಇತರರಿಂದ ಇವರು ಕಸಕ್ಕೂ ಕಡೆಯಾಗಿ ಭಾವಿಸಲ್ಪಡುವುದನ್ನೂ ಅವರ ನಿಕೃಷ್ಟ ಸ್ಥಿತಿಯನ್ನೂ ಈಕ್ಷಿಸಿದ ಯಾವ ಭಾರತ ಭ್ರಾತೃವಿನ ಹೃದಯವು ಕರಗಿ ನೀರಾಗದಿರದು ! ತುಂಬಿದ ಮನೆಯಲ್ಲಿ ಅತ್ತರೆ ಆ ಮನೆಯು ಅಭಿವೃದ್ಧಿಯಾಗುವುದಿಲ್ಲವೆಂದು ಇತರರು ಆಕ್ಷೇಪಿಸುವರಾದ್ದರಿಂದ ತಾವಿರುವ ಮನೆಯಲ್ಲಿ ಅಳುವುದಕ್ಕೆ ಕೂಡ ಸ್ವಾತಂತ್ರ್ಯವಿಲ್ಲದೆ ಪರಾಧೀನೆಯರಾಗಿ ದುಃಖವನ್ನು ನುಂಗಿಕೊಂಡು ಹೇಳಲಾರದೆ ಅನುಭವಿಸಲಾರದೆ ಮೂಗು ಜೀವಗಳಂತೆ ಕಾಲಕಳೆಯುತ್ತಿರುವರು. ಅನೇಕರು ದಾರಿದ್ರ್ಯಸ್ಥಿತಿಯಲ್ಲಿದ್ದರೂ, ಹೊಟ್ಟೆಯ ತುಂಬ ಹಿಟ್ಟಿಲ್ಲದೆ ಮೈ ತುಂಬ ಬಟ್ಟೆಯಿಲ್ಲದ ಅತಿ ದೀನಾವಸ್ಥೆಯಲ್ಲಿರುವರು. ಪ್ಲೇಗ್, ಕಾಲರಾ, ಯುದ್ಧ, ಇನ್‌ಫ್ಲೂಇನ್ಜಾ. (Influenza) ಮೊದಲಾದ ರೋಗಾದಿಗಳು ಅವತರಿಸಿ ನಮ್ಮದೇಶದಲ್ಲಿ ವಿಧವೆಯರ ಸಂಖ್ಯೆಯನ್ನು ಹೆಚ್ಚುಮಾಡಿರುವುವು. ಪಾಶ್ಚಾತ್ಯದೇಶದಲ್ಲಿನ ವಿಧವೆಯರಿಗೆ ನಮ್ಮ ದೇಶದ ವಿಧವೆಯರಿಗಿರುವಷ್ಟು ಕಷ್ಟನಿಷ್ಠುರಗಳಿಲ್ಲದಿರುವುದರಿಂದ ಅವರು ಈ ವಿಷಯಕ್ಕೆ ಅಷ್ಟಾಗಿ ಲಕ್ಷ್ಯಕೊಡುವುದಿಲ್ಲ. ನಮ್ಮ ದೇಶದ ವಿಧವೆಯರ ದುಃಸ್ಥಿತಿಯನ್ನು ಕಂಡು ಪಾಶ್ಚಾತ್ಯರು ಪರಿಹಾಸ್ಯ ಮಾಡುತ್ತಿರುವರು. ಶೇಕಡಾ ೯೦ ಜನ ವಿಧವೆಯರು ಕೇವಲ ನಿಕೃಷ್ಟ ಸ್ಥಿತಿಯಲ್ಲಿರುವರು. ಇವರ ಕಷ್ಟನಿಷ್ಠುರಗಳನ್ನು ನೋಡಿದರೆ ಯಾವ ಕಟುಕನಮನಸ್ಸಾದರೂ ಕರಗಿ ನೀರಾಗುವುದು. ಪತಿಯನ್ನು ಕಳೆದುಕೊಳ್ಳುವುದೇನೋ ಭಗವಂತನ ನಿಯಮವಾದರೂ ಇವರಿಗೆ ನಾನಾ ವಿಧವಾದ ವಿಕಾರರೂಪವನ್ನೇರ್ಪಡಿಸಿ ಮೊದಲೇ ನೊಂದಿರುವ ಅವರನ್ನು ಮತ್ತಷ್ಟು ನೋಯಿಸುವುದ್ಯಾವ ನಿಯಮ ? ಮುಸಲ್ಮಾನರ ಆಳಿಕೆಯಲ್ಲಿ ಅವರ

ದೌರಾತ್ಮ್ಯಕ್ಕೆ ಹೆದರಿ ಬಾಲ್ಯವಿವಾಹ, ವಿಧವೆಯರಿಗೆ ವಿರೂಪವೇಮೊದಲಾದವುಗಳನ್ನು ಏರ್ಪಡಿಸಿದರೂ ಸುಖವೂ ಶಾಂತಿಯೂ ನೆಲಗೊಂಡಿರುವ ಈ ಕಾಲದಲ್ಲಿ ಎಷ್ಟು ಮಾತ್ರವೂ ಅವಶ್ಯಕವೇನಿಲ್ಲ. ಭಗವಂತನರ್ಥಮಾಡಿದರೆ ಮನುಷ್ಯರರ್ಥಮಾಡುವರು. ಇಂತಹ ದುರ್ದಮನೀಯವಾದ ವಿಧಿಯನ್ನೇರ್ಪಡಿಸುವವರಿಗೆ ಒಂದು ವೇಳೆ ಹಿತವಾಗಿಯೂ ಶಾಸ್ತ್ರ ಸಮ್ಮತವಾಗಿಯೂ ತೋರಬಹುದಾದರೂ ಅನುಭವಿಸುವ ನಿರ್ಭಾಗ್ಯರಿಗೆಷ್ಟು ಕಷ್ಟವಾಗಿರಬಹುದೆನ್ನುವುದನ್ನು ಯೋಚಿಸುವರಾರು ? ಈ ಪ್ರಕೃತದಲ್ಲಿ ಎಲ್ಲೆಲ್ಲಿಯೂ "ಸ್ತ್ರೀ ವಿದ್ಯಾಭ್ಯಾಸ, ಕೈಗಾರಿಕೆ, ಕುಶಲವಿದ್ಯಾಭಿವೃದ್ಧಿ" ಎನ್ನುವುದೇ ದೊಡ್ಡ ಕೂಗಾಗಿದ್ದರೂ ಈ ನಿರ್ಭಾಗ್ಯರಲ್ಲನೇಕರಿಗೆ ಇವುಗಳಿಂದಾವ ಪ್ರಯೋಜನವೂ ಆದಂತೆ ತೋರಲಿಲ್ಲ. ಪುರುಷರಿಗಿಂತ ಸ್ತ್ರೀಯರು ಹೆಚ್ಚು ಬುದ್ಧಿಶಕ್ತಿಯುಳ್ಳವರೆಂಬುವನ್ನೆಲ್ಲರೂ ಒಪ್ಪಿಕೊಳ್ಳುವರಾದ್ದರಿಂದ ಇವರಿಗೆ ವಿದ್ಯಾಭ್ಯಾಸವನ್ನು ಮಾಡಿಸಿದಲ್ಲಿ ಉಪಾಧ್ಯಾಯಿನಿಯರಾಗಿಯೂ ವೈದ್ಯರಾಗಿಯೂ ನಮ್ಮ ದೇಶಕ್ಕೆ ಎಷ್ಟೋ ಉಪಕಾರ ಮಾಡಲು ಬದ್ಧಕಂಕಣರಾದಾರು. ಇವರುಗಳನ್ನು ಮುಂದಾಳಾಗಿ ನಿಂತು ಕೆಲಸ ಮಾಡದಂತೆ ಶಾಸ್ತ್ರವೂ ಪದ್ಧತಿಗಳೂ ತಡೆಯುತ್ತಿರುವವು. ಶಾಸ್ತ್ರವ ಒಬ್ಬೊಬ್ಬರಿಗೆ ಒಂದೊಂದು ರೀತಿಯಾಗಿರಲು ಕಾರಣವೇನೋ ! ಶಾಸ್ತ್ರಕಾರರ ಬಲವನ್ನೆಲ್ಲಾ ಕೇವಲ ನಿರ್ಬಲರಾದ ಅಬಲೆಯರಮೇಲೆಯೇ ಪ್ರಯೋಗಿಸಬೇಕೇ ? ಪುರುಷರು ೭೫ ವರ್ಷ ವಯಸ್ಸಾಗುವವರೆಗೂ ಎಷ್ಟು ಪತ್ನಿಯರು ಮೃತರಾದಾಗ್ಯೂ ಪುನಃ ವಿವಾಹವಾಗಲು ಅನುಮತಿಕೊಡುವ ಶಾಸ್ತ್ರವು ಕೇವಲ ಈ ನಿರ್ಭಾಗ್ಯರಲ್ಲಿ ಕಾಠಿಣ್ಯವನ್ನು ವಹಿಸಲು ಕಾರಣವೇನೋ ! ಶಾಸ್ತ್ರಕ್ಕೆ ಕೂಡ ಒಂದು ವೇಳೆ ಪಕ್ಷಪಾತವಿರಬಹುದೇನೋ ! ಶಂಕರಾಚಾರ ಸ್ವಾಮಿಗಳವರು ಸ್ತ್ರೀ ಪುನರ್ವಿವಾಹಕ್ಕೆ ಶಾಸ್ತ್ರದಲ್ಲಿ ಅಧಿಕಾರವಿರುವದೆಂದೂ ಆಚರಣೆಯಲ್ಲಿಲ್ಲವೆಂದೂ ಅಪ್ಪಣೆ ಕೊಡಿಸಿರುವರು. ರಾಜಾರಾಮಮೋಹನರಾಯ್ (Raja Rama Mohana Roy) ಅವರು, ಈಶ್ವರಚಂದ್ರವಿದ್ಯಾಸಾಗರರು (Eswara Chandra Vidya Sagar) ಪಂಡಿತ ರಮಾಬಾಯಿ (Pandit Ramabai) [illegible]

ರವೀಂದ್ರನಾಥ ಠಾಕೂರ್ (Ravindranath Tagore) ರಾಮೇಶಲಿಂಗಂ ಪಂತುಲು (Ramesalingam Pantulu) ಮೊದಲಾದ ಅನೇಕಾನೇಕ ಮಹನೀಯರುಗಳು ಅಲ್ಲಲ್ಲ ಸ್ವಲ್ಪಮಟ್ಟಿಗೆ ವಿಧವಾವಿವಾಹವು ಶಾಸ್ತ್ರಸಮ್ಮತವೆಂತಲೂ, ಆಚರಣೀಯವೆಂತಲೂ ಸಭೆಗಳನ್ನೇರ್ಪಡಿಸಿದರೂ ಆಚರಣೆಯಿಲ್ಲದೆಯೇ ಇರುವುದು. ಉತ್ತರದೇಶದಲ್ಲಿಯೂ ಆಂಧ್ರದೇಶದಲ್ಲಿಯೂ ಅನೇಕಕಡೆ ವಿಧವಾವಿವಾಹವು ಆಚರಣೆಯಲ್ಲಿರುವುದು. ಪುನರ್ವಿವಾಹಕ್ಕೆ ಶಾಸ್ತ್ರ ಸಮ್ಮತವಿಲ್ಲವೆಂದೇ ಇಟ್ಟುಕೊಳ್ಳೋಣ. ಇವರು ವಿದ್ಯಾವತಿಯರಾಗಿ ತಮ್ಮ ಸೋದರೀವರ್ಗಕ್ಕೂ ದೇಶಕ್ಕೂ ಹಿತಚಿಂತಕರಾಗಲು ಯಾವ ಶಾಸ್ತ್ರವೂ ತಡಮಾಡಲಾರದಷ್ಟೆ. ಅನೇಕರು ಸಹಗಮನ ಪದ್ಧತಿಯನ್ನು ನಿಲ್ಲಿಸಿದ "ಲಾರ್ಡ್ ಡಾಲ್‌ಹೌಸಿ" (Lord Dalhousie) ಪ್ರಭುವಿಗೆನಮ್ಮಗಳ ಕಷ್ಟವು ತಿಳಿದಿದ್ದರ ಅವರು ಸಹಗಮನ ಪದ್ಧತಿಯನ್ನು ನಿಲ್ಲಿಸುತ್ತಲೇ ಇರಲಿಲ್ಲವೆನ್ನುವರು. ಸಮುದ್ರಯಾನ (Sea Voyage) ಬೇರ ಬೇರ ಜಾತಿಗಳಲ್ಲಿ ವಿವಾಹ (Inter caste marriage) ಮೊದಲಾದವುಗಳು ಶಾಸ್ತ್ರಸಮ್ಮತವಾದಂತೆ ಈ ವಿಷಯವೂ ಶಾಸ್ತ್ರಸಮ್ಮತವಾಗಬಹುದು. ಇವರಿಗೆ ವಿದ್ಯೆಯ ಬೆಂಬಲವೂ, ಸೋದರಿಯರ ಸಹಾಯವೂ ದೊರತಲ್ಲಿ ಎಂತಹ ಕಾರ್ಯಗಳನ್ನೂ ನಿರ್ವಹಿಸಬಲ್ಲರು. ಸಂಸಾರಸ್ಥರಾದ ಯುವತಿಯರಿಗೆ ಅನೇಕ ಅನಿವಾರ್ಯಗಳಿರಬಹುದು. ಇವರುಗಳಾದರ ಸಂಸಾರ ತಾಪತ್ರಯವಿಲ್ಲದೆ ಮನಸ್ಸು ಮಾಡಿದಲ್ಲಿ ಶ್ರಮಸಹಿಷ್ಣುತೆಯಿಂದ ನಿರ್ವಹಿಸಬಲ್ಲರು. ವಿಧವಾವಸ್ಥೆಯಲ್ಲಿರುವ ಯುವತಿಯರನೇಕರು ಸಹಿಸಲಸಾಧ್ಯವಾದ ಕಷ್ಟಪರಂಪರಗಳನ್ನು ಕಣ್ಣಿಂದ ನೋಡಿಯೂ ಕಿವಿಯಿಂದ ಕೇಳಿಯೂ ಇರುವೆನು. ಸರ್ಕಾರದವರ ಆಜ್ಞೆಯ ಮುಂದೆ ಶಾಸ್ತ್ರವೂ ಮಾಯವಾಗುವುದು. ಹುಡುಗಿಯರಿಗೆ ೭ ವರ್ಷದ ಮೇಲೆ ವಿವಾಹ ಮಾಡಿದರ ಕನ್ಯಾದಾನ ಫಲವಿಲ್ಲದೆ ಹೋಗುವುದೆಂದು ವಾದಿಸತಕ್ಕವರು ಸರ್ಕಾರದವರ ಆಜ್ಞೆಯನ್ನು ಮೀರಲಾರದೆ ಹನ್ನೆರಡು ವರ್ಷಗಳಿಗೆ ವಿವಾಹ ಮಾಡುತ್ತಿಲ್ಲವೇ ? ಅದರಂತೆಯೇ ಈ ವಿಷಯವೂ ಮನಸ್ಸು ಮಾಡಿದರೆ ಸಾಧ್ಯವಾಗಬಹುದು.

ಶಾಸ್ತ್ರಕಾರರನ್ನು ದೂಷಿಸಬೇಕೆಂದಾಗಲಿ ಬ್ರಾಹ್ಮಣರನ್ನು ನಿಂದಿಸಬೇಕೆಂಬ ಉದ್ದೇಶದಿಂದಾಗಲಿ ಈಗ್ರಂಥವನ್ನು ಬರೆಯಲಿಲ್ಲ. ನಮ್ಮ ದೇಶದ ನಿರ್ಭಾಗ್ಯರಾದ ಸೋದರಿಯರ ದುಸ್ಥಿತಿಯನ್ನು ವಿವರಿಸಿ ಅವರಿಂದ ದೇಶಹಿತಕ್ಕೆ ತಕ್ಕ ಕಾರ್ಯಗಳನ್ನು ಮಾಡಿಸಿಕೊಳ್ಳಲು ಅನುಕೂಲವಾಗುವಂತೆ ಮಾಡಿದರೆ ಅವರ ಮನಸ್ಸಿಗೆ ಹಿತವುಂಟಾಗುವುದು ಮಾತ್ರವಲ್ಲದೆ ದೇಶ ಸೇವೆಗೆ ಬೇಕಾದ ಕಾರ್ಯಗಳೂ ನಡೆಯುವಂತಾಗಬಹುದೆಂಬ ಉದ್ದೇಶವೇ ಈ ದುಃಖಭರಿತವಾದ ದೃಶ್ಯವನ್ನು ವಾಚಕರ ಮುಂದಿಡಲು ನನ್ನನ್ನು ಪ್ರೋತ್ಸಾಹಿಸಿತು. ಕಾಲವು ಮುಂದುವರಿದು ಸಂಘಸಂಸ್ಕರಣಗಳು (Social Reform) ಹೆಚ್ಚುತ್ತ ಬಂದಂತೆಲ್ಲ ಇವರ ಕಷ್ಟನಿಷ್ಠುರಗಳು ನೀಗಬಹುದೆಂದು ನಂಬಬಹುದಾಗಿದೆ. ಈ ವಿಷಯದಲ್ಲಿ ನಾನಾಗಿಯೇ ಪ್ರಯತ್ನಪಡದಿದ್ದಾಗ್ಯೂ ಕಾಲವೇ (Nature) ತನ್ನ ಕೆಲಸವನ್ನು ನಡೆಸುವುದನ್ನುವುದರಲ್ಲಿ ಸಂಶಯವಿಲ್ಲ.

ಒಂದು ದೇಶದ, ಮುಖ್ಯವಾಗಿ ಕರ್ಣಾಟಕ ರಾಜ್ಯದ, ಅಭ್ಯುದಯಕ್ಕೆ ಮುಖ್ಯವಾದ ವಿದ್ಯಾಪ್ರಚಾರಕ್ಕೆ ದೇಶಭಾಷೆಯೇ ಮುಖ್ಯೋಪಕರಣವಾಗಿರುವುದರಿಂದ ದೇಶಾಭಿಮಾನಿಗಳೆಲ್ಲರೂ ದೇಶಭಾಷಾಭಿವೃದ್ಧಿಗೆ ಬದ್ಧಕಂಕಣರಾಗಬೇಕು. ಅದರ ಅತ್ಯುತ್ತಮವಾದ ದೇಶೀ ಪದಗಳಿಗೆ ಅನ್ಯದೇಶೀಯ ಪದಗಳ ಆದೇಶವೆಂಬ ಸಾಂಕ್ರಾಮಿಕ ಬಾಧ್ಯವು ಪ್ರಾಪ್ತವಾದಾಗ ಅದರ ಪರಿಷ್ಕರಣಕ್ಕಾಗಿಯಾದರೂ ಪ್ರತಿಯೊಬ್ಬ ಕನ್ನಡಿಗನೂ ಕೈಲಾದಷ್ಟು ಸಾಧಿಸಬೇಕಾಗಿರುವುದು ಕರ್ತವ್ಯವಾದುದರಿಂದ ಕೇವಲ ಭಾಷಾಸೇವೆ ಮಾಡಬೇಕೆನ್ನುವ ಉದ್ದೇಶದಿಂದ ಕೇವಲ ಕರ್ಣಾಟಕ ಮಾತೆಯ ಸೇವೆಯನ್ನು ಮಾಡಬೇಕೆಂತಲು. ಅಳಿಲಸೇವೆ ಎಂಬಂತೆ ಸ್ವಲ್ಪಮಟ್ಟಿಗಾದರೂ ಮಾಡಿದೆನೆನ್ನುವ ಸಂತೃಪ್ತಿಗಾಗಿ ಈ ಗ್ರಂಥವನ್ನು ರಚಿಸಿದೆನು. ಈ ಗ್ರಂಥವು ಸಾಧ್ವಿ ಸೆಯಾಪತ್ರಿ ೧೯೨೧ ನೆಯ ಇಸವಿಯಲ್ಲಿ ಪ್ರಕಟಿಸಲ್ಪಟ್ಟಿತು. ಪುನರ್ಮುದ್ರಣಕ್ಕೆ ತಕ್ಕ ಪ್ರೋತ್ಸಾಹವು ದೊರೆತದ್ದರಿಂದ ಪರಿಷ್ಕರಿಸಿ ಪುನರಾವರ್ತಿ ಮುದ್ರಿಸಿರುವೆನು. ಈ ದುಃಖಭರಿತವಾದ ದೃಶ್ಯವನ್ನೋಡಿ ಪ್ರತಿಯೊಬ್ಬರೂ ತಮ್ಮತಮ್ಮ ನಿರ್ಭಾಗ್ಯಪುತ್ರಿಯರ, ಸೋದರಿಯರ

ನುತಾಪವಾದ ದುಃಸ್ಥಿತಿಯನ್ನು ದಯವಿಟ್ಟು ಮನಸ್ಸಿಗೆ ತಂದು ಕೊಂಡು ಅವರನ್ನು ಸಂಕಟಪಡಿಸದೆ ಸಂಪೂರ್ಣವಿದ್ಯಾವತಿಯರನ್ನಾಗಿ ಮಾಡಿದರೆ ಅವರು ವಿದ್ಯೆಯ ಬಲದಿಂದ ತಮ್ಮ ಜೀವನವನ್ನು ತಾವೇ ನಡೆಸಿಕೊಳ್ಳುವರಲ್ಲದೆ ತಮ್ಮ ದೇಶಕ್ಕೂ ಸೋದರೀ ವರ್ಗಕ್ಕೂ ಹಿತಚಿಂತಕರಾಗಿ ದುಃಖವು ಮನಸ್ಸಿಗೆ ತಟ್ಟದಂತೆ ಕಾಲ ಕಳೆಯಲು ಅನುಕೂಲವಾಗುವುದು. ಆದುದರಿಂದ ಪ್ರತಿಯೊಬ್ಬ ಸೋದರ ಸೋದರಿಯರೂ ಈ ದೃಶ್ಯವನ್ನು ಮನಸ್ಸಿಗೆ ತಂದು ಕೊಂಡು ಈ ನಿರ್ಭಾಗ್ಯರ ದುಃಖನಿವಾರಣೆಗೆ ತಕ್ಕ ಪ್ರಯತ್ನಮಾಡಿದರೆ ನನ್ನ ಶ್ರಮವು ಸಾರ್ಥಕವಾದಂತೆ ಭಾವಿಸುವೆನಲ್ಲದೆ ಈ ವಿಷಾದ ಭರಿತವಾದ ದೃಶ್ಯವನ್ನು ಬರೆಯುವಾಗ ನನಗುಂಟಾದ ದುಃಖವು ಬಹುಮಟ್ಟಿಗೆ ಕಡಮೆಯಾಯಿತೆಂದು ತಿಳಿದು ಆನಂದಿಸುವೆನು.

ಈ ಗ್ರಂಥದಲ್ಲಿ ಪ್ರಮಾದ ವಶದಿಂದ ಅನೇಕ ದೋಷಗಳಿರಬಹುದು. ಪ್ರಾಜ್ಞರೂ ವಿದ್ಯಾವಂತರೂ ಆದ ಸೋದರಿಯರು ಹಂಸಕ್ಷೀರನ್ಯಾಯವನ್ನನುಸರಿಸಿ ಕ್ಷಮಿಸಬೇಕಾಗಿ ಪ್ರಾರ್ಥನೆ. ಈಗ್ರಂಥಕ್ಕೆ ಪ್ರಸ್ತಾವನೆಯನ್ನು ಬರೆದುಕಳುಹಿಸಿದ ಧಾರವಾಡದಲ್ಲಿನ ಪ್ರಸಿದ್ಧ ದೇಶಭಕ್ತರೂ "ಜಯಕರ್ಣಾಟಕ" ಮಾಸಪತ್ರಿಕೆಯ ಸಂಪಾದಕರೂ, ಕರ್ಣಾಟಕ ಮಾತೆಯ ಪ್ರಿಯಪುತ್ರರೂ ಆದ ಶ್ರೀಯುತ, ವೆಂಕಟೇಶ ಭೀಮರಾವ್ - ಆಲೂರ್, ಬಿ. ಎ. ಎಲ್-ಎಲ್-ಬಿ ಯವರಿಗೂ ಅಲ್ಪಕಾಲದ ಅವಧಿಯಲ್ಲಿ ಪುಸ್ತಕಗಳನ್ನು ಅಂದವಾಗಿ ಮುದ್ರಿಸಿ ಕೊಟ್ಟ ಮುದ್ರಣಶಾಲೆಯವರ ಸ್ಥಾಪಕರಾದ ಶ್ರೀಯುತ ಮ|| ರಾ|| ಬಿ. ಶ್ರೀನಿವಾಸಯ್ಯಂಗಾರ್, ಅವರಿಗೂ ಪುನರ್ಮುದ್ರಣಕ್ಕೆ ಕೆಲವು ಸೂಚನೆಗಳನ್ನು ಕೊಟ್ಟ ನನ್ನ ಮಿತ್ರರಿಗೂ ನನ್ನ ಕೃತಜ್ಞತಾಪೂರ್ವಕವಾದ ವಂದನೆಗಳು.

**ಶಾರದಾ ಗ್ರಂಥಾಲಯ,**
ಚಾಮರಾಜಪೇಟೆ,
ಬೆಂಗಳೂರು ಸಿಟಿ.

ಪರಮಸಾಧ್ವಿಯರ ಪಾದಧೂಳಿ,
**ಆರ್. ಕಲ್ಯಾಣಮ್ಮ.**
ಗ್ರಂಥಕರ್ತೃ.

೧—೨—೧೯೨೪.

# ನಿರ್ಭಾಗ್ಯವನಿತೆ

—————o—————

## ಒಂದನೆಯ ಅಧ್ಯಾಯ

——— ———

### ಮಾತಾಪುತ್ರರ ಸಂಭಾಷಣೆ.

ಸತೀಶಾ! ಈ ವರನಿಗೆ ಕೊಡುವುದರಲ್ಲಿ ಅಭ್ಯಂತರವೇನಿದೆ?

ಸತೀಶ:—ಅಮ್ಮಾ! ಅಭ್ಯಂತರವೇನೂ ಇಲ್ಲ. ಆದರೂ ಪ್ಯಾಪಿಯೀನನಿಗೆ ಪುತ್ರಿಯನ್ನು ಧಾರೆಯೆರೆಯಲು ನನ್ನ ಮನಸ್ಸು ಸಮ್ಮತಿಸದಲ್ಲಾ, ಏನುಮಾಡಲಿ?

ತಾಯಿ:—ಸತೀಶಾ! ನಾವು ಈಗ ವಿವಾಹ ಮಹೋತ್ಸವವನ್ನು ಜರುಗಿಸಿದರೆ ಮುಂದಕ್ಕೆ ಆ ವರನನ್ನು ನಮ್ಮ ಮನೆಯಲ್ಲಿಯೇ ಇಟ್ಟುಕೊಂಡು ವಿದ್ಯಾವಂತನನ್ನಾಗಿ ಮಾಡಬಾರದೇಕೆ!

ಸತೀಶ:—ಅಮ್ಮಾ ಆಗಬಹುದು. ಆದರೂ ಬುದ್ಧಿಯ ಸೂಕ್ಷ್ಮವು ಬಾಲ್ಯದಲ್ಲಿಯೇ ತಿಳಿಯುವದಲ್ಲವೇ! ಅವನಿಗೆ ಮೊದಲಿನಲ್ಲಿ ಬುದ್ಧಿಯಿರುವಂತೆ ಕಾಣೆ. ಅವನಿಗೆ ಮಾತ್ರ ನಮ್ಮ ಪುತ್ರಿಯನ್ನು ವಿವಾಹ ಮಾಡಿದರೆ ಜೀವಾವಧಿ ಅವಳಾದರೂ ವ್ಯಸನಸನುಭವಿಸಬೇಕಾಗಿ ಬರುವುದಲ್ಲದೆ ನಮಗೂ ಅದರಿಂದ ಬಹು ದುಃಖವುಂಟಾಗುವುದು.

ತಾಯಿ:—ಸತೀಶಾ! ನಿನಗೆ ನನ್ನ ಮಾತು ರುಚಿಸಲಿಲ್ಲ. ನಿನ್ನ ಮನಸ್ಸಿನಲ್ಲಿ ನಿನ್ನ ಪತ್ನಿಯ ಸಹೋದರನ ಪುತ್ರನಿಗೆ ನಮ್ಮ [illegible]

ಯನ್ನು ಕೊಟ್ಟು ವಿವಾಹ ಬೆಳೆಸಬೇಕೆಂದಿರುವುದಲ್ಲವೆ? ಅವನಿಗಿಂತ ನಿನ್ನ ಸಹೋದರಿಯ ಪುತ್ರನು ಶತಾಂಶ ಗುಣವಂತನು, ನೀತಿವಂತನು, ಸದ್ಗುಣವುಳ್ಳವನು, ಅವನಿಗೆ ನೀನು ಪುತ್ರಿಯನ್ನು ಕೊಡದೇ ಹೋದರ ಮತ್ತಾರು ಕೊಡುವರು? ನೀವು ಈ ನಾಗರೀಕ ಕಾಲದವರು, ನಮ್ಮಂಥಾ ಪೂರ್ವಕಾಲದವರ ಮಾತು ನಿಮಗೆ ರುಚಿಸುವುದೆ? ಯಾರಿಗೆ ಬೇಕಾದರೂ ನಿನ್ನ ಪುತ್ರಿಯನ್ನು ಕೊಡು. ನಾನು ತಡೆಮಾಡುವುದಿಲ್ಲ. ನಾಗರೀಕವು ಹೆಚ್ಚುತ್ತಾ ಬಂದಹಾಗೆಲ್ಲಾ ನಿಮ್ಮಗಳ ಬುದ್ಧಿಯೂ ಚಪಲವಾಗುತ್ತಿರುವುದು. ತಾಯಿ ತಂದೆಗಳ ಮಾತನ್ನೇ ನೀವು ಲಕ್ಷ್ಯಮಾಡುವುದಿಲ್ಲ. ದೊಡ್ಡವರು ಚಿಕ್ಕವರೆನ್ನುವ ಮರ್ಯಾದೆಯೇ ಹೋಯಿತು. ಎಲ್ಲಾ ಕಾಲಪುರುಷನ ಮಹಿಮೆ, ನಿಮ್ಮಗಳಿಗೆ ಹೇಳಿ ಏನುಫಲ, ಇನ್ನೂ ನಮ್ಮ ಕಣ್ಣೆದಿರಿಗೆ ಏನೇನು ಅನರ್ಥಗಳು ನಡೆಯುವುದೋ! ಇಂದಿರೆಗೆ ಆಗಲೇ ಒಂಬತ್ತು ವರ್ಷ ತುಂಬಿ ಹತ್ತನೆಯ ವರ್ಷವು ಮೊದಲಾಗುತ್ತಿದೆಯಲ್ಲ. ಇನ್ನೂ ವಿವಾಹವಿಲ್ಲದೆಯೇ ನಿಂತಿರುವಳು. ನಿಮ್ಮಂಥಾವರ ಮಧ್ಯ ಇದ್ದರ ನಮ್ಮ ಜಾತಿಯೂ, ಕುಲವೂ ಹೋಗುವುದು.

ಸತೀಶ :—ಅಮ್ಮಾ ಇದೇನನ್ಯಾಯ,! ನೀನು ಹೀಗೆಲ್ಲಾ ಹೇಳುವುದನ್ನು ನೋಡಿದರ ನನ್ನ ಮನಸ್ಸಿಗೆ ಬಹಳ ವ್ಯಾಕುಲವಾಗುವುದು. ಇಂದಿರೆಯು ಇನ್ನೂ ಆಡುವ ಹಸುಮಗು; ಅವಳನ್ನು ಈಗಲೇ ವಿವಾಹಬಂಧನಕ್ಕೆ ಸಿಲುಕಿಸಿ ಸಂಸಾರಸಾಗರದಲ್ಲಿ ಮುಳುಗಿಸಿ ತೇಲಿಸುವುದಕ್ಕೆ ನನ್ನ ಮನಸ್ಸು ಎಂದಿಗೂ ಒಪ್ಪಲಾರದು. ನನ್ನ ಪುತ್ರನಾದ ಶಚೀಂದ್ರನೂ ಈ ಘೋರ ಕೃತ್ಯಕ್ಕೆ ಎಂದಿಗೂ ಒಡಂಬಡಲಾರನು.

ತಾಯಿ :—ಸತೀಶಾ, ನಾನು ದೊಡ್ಡವಳು ಹೇಳುತ್ತೇನೆಂಬುದು ಕೂಡಾ ನಿನಗೆ ಲಕ್ಷ್ಯವಿಲ್ಲಾ, ನೀನೇ ಹೀಗೆ ನಡೆಯುವಾಗ ನಿನ್ನ ಮಗನ ನಡವಳಿಕೆಯನ್ನು ಕೇಳಬೇಕೆ? ಅವನು ಈ ಕಲಿಕಾಲದವನು. ನಾಗರೀಕವನ್ನು ಅಭ್ಯಾಸ ಮಾಡಿರುವನು. ಅವನಿಗೆ

ಯಾರಲಕ್ಷ್ಯವೂ ಇಲ್ಲ, ಹೆಚ್ಚು ಹೇಳಲೇಕೆ! ನಿನಗೆ ಇಷ್ಟವಿದ್ದರೆ ನಿನ್ನ ಸಹೋದರಿಯ ಪುತ್ರನಿಗೆ ಇಂದಿರೆಯನ್ನು ಧಾರೆಯೆರೆದುಕೊಡು. ಇಲ್ಲವಿದ್ದರೆ ನಿನ್ನ ಪತ್ನಿಯಾದ ಸ್ವರ್ಣಳ ಸಹೋದರನ ಪುತ್ರನಿಗೆ ಧಾರೆಯೆರೆದು ಕೊಡು. ನಿನ್ನಿಷ್ಟದಂತೆ ಮಾಡು, ಇನ್ನು ನಾನು ಈ ವಿಷಯದಲ್ಲಿ ಪ್ರವೇಶಿಸುವುದಿಲ್ಲ." ಎಂದು ಹೇಳಿ ಕಣ್ಣೀರು ಸುರಿಸಲು ಮೊದಲು ಮಾಡಿದಳು.

ಸತೀಶನಿಗೆ ಸಹೋದರಿಯೊಬ್ಬಳಿದ್ದಳು. ಆಕೆಗೆ ವಿದ್ಯಾವಿಹೀನನಾದ ನಾರಾಯಣನೆಂಬ ಪುತ್ರನಿದ್ದನು. ಇವನ ರೂಪವನ್ನು ಕಂಡಮಾತ್ರಕ್ಕೇ ಆಳುವ ಮಕ್ಕಳು ಬಾಯಿಮುಚ್ಚುತ್ತಿದ್ದರು. ವಿದ್ಯೆಯಲ್ಲೋ ಹೇಳತೀರದು, ವಯಸ್ಸು 16 ಆಗಿದ್ದರೂ ಲೋಯರ್ ಸೆಕೆಂಡರಿ ತರಗತಿಯಲ್ಲಿ ನಾಲ್ಕು ವರ್ಷಗಳಿಂದಲೂ ಓದುತ್ತಿರುವನು. ಸತೀಶನಾದರೋ ಬಿ.ಎ., ಬಿ.ಎಲ್., ಪರೀಕ್ಷೆಗಳಲ್ಲಿ ಉತ್ತೀರ್ಣನಾಗಿ ಡಿಪ್ಯುಟಿ ಕಲೆಕ್ಟರ್ ಕೆಲಸದಲ್ಲಿದ್ದನು. ನವನಾಗರಿಕ ಪ್ರಿಯನಾದ ಸತೀಶನಿಗೆ ಇಂಥಾ ಮೂರ್ಖನಿಗೆ ತನ್ನ ಸ್ವರ್ಣ ಪುತ್ರಿಯನ್ನು ಧಾರೆಯೆರೆಯಲು ತಿಲಮಾತ್ರವೂ ಮನಸ್ಸಿರಲಿಲ್ಲ. ಸತೀಶನ ತಾಯಿಯಾದರೋ ತನ್ನ ಪೌತ್ರಿಯನ್ನು ತನ್ನ ಮಗಳ ಮಗನಾದ ನಾರಾಯಣನಿಗೆ ಧಾರೆಯೆರೆದರೆ ವಿದ್ಯಾವಿಹೀನನೂ ಕುರೂಪಿಯೂ ಆದ ಮೂರ್ಖನಿಗೆ ಒಂದು ಆಸರೆಯು ದೊರಕುವುದೆಂದು ಎಂದು ಸತೀಶನನ್ನು ಸುಮ್ಮನೆ ಪೀಡಿಸುತ್ತಿದ್ದಳು. ಸತೀಶನ ಭಾರ್ಯೆಯಾದ ಸ್ವರ್ಣಳಿಗೆ ಸಹೋದರನ ಪುತ್ರನೊಬ್ಬನಿದ್ದನು. ಇವನು ರೂಪವಂತನಾಗಿಯೂ ಮತ್ತು ವಿದ್ಯಾವಂತನಾಗಿಯೂ ಇದ್ದನು. ಇವನು ಎಫ್. ಎ. ತರಗತಿಯಲ್ಲಿ ವ್ಯಾಸಂಗಮಾಡುತ್ತಿದ್ದನು. ಇವನಿಗೆ ಕೊಡಬೇಕೆಂದು ಸ್ವರ್ಣಳ ಅಭಿಪ್ರಾಯವು. ಸತೀಶನೂ ಕೂಡ ಈ ವರನನ್ನೇ ಒಪ್ಪಿದ್ದನು. ಇಂದಿರೆಯು ಬಾಲ್ಯದಿಂದಲೂ ತನ್ನ ಸೋದರಮಾವನ ಮನೆಯಲ್ಲಿಯೇ ವಿಶೇಷವಾಗಿ ಬೆಳೆದವಳಾದ್ದರಿಂದ ಸೋದರಮಾವನ ಪುತ್ರನಾದ ಸುಂದರೇಶನಮೇಲೆ ಬಹಳ ಪ್ರೀತಿಯುಳ್ಳವಳಾಗಿದ್ದಳು. ಸ್ವರ್ಣಳೂ ಕೂಡ ತನ್ನ ಪುತ್ರಿಯನ್ನು ವಿದ್ಯಾವಂತನಾದ ತನ್ನ

ಸಹೋದರನ ಪುತ್ರನಿಗೆ ಕೊಡಬೇಕೆಂದು ಹಠ ಹಿಡಿದಳು. ಶಚೀಂದ್ರನಾದರೋ ತನ್ನ ಸಹೋದರಿಯು ಬಹಳ ರೂಪವತಿಯೆಂದೂ, ವಿದ್ಯಾಪ್ರಿಯಳೆಂದೂ ಅವಳನ್ನು ವಿದ್ಯಾವಂತನಾದ ವರನಿಗೇ ಕನ್ಯಾದಾನ ಮಾಡಬೇಕೆಂದು ನಿಶ್ಚೈಸಿಕೊಂಡಿದ್ದನು. ಪತ್ನೀಪುತ್ರರ ಅಭಿಪ್ರಾಯಕ್ಕೆ ಒಡಂಬಡುವುದೋ ಅಥವಾ ಪೂಜ್ಯಮಾತೆಯ ಇಷ್ಟವನ್ನು ನೆರವೇರಿಸುವುದೋ ಸತೀಶನಿಗೆ ಯಾವುದೂ ತೋರಲೇ ಇಲ್ಲ. ಸ್ವರ್ಣಳ ಸಹೋದರನು ಕೇವಲ ದರಿದ್ರನು, ಹಣವಂತನಲ್ಲದಿದ್ದರೂ ಗುಣವಂತನು. ಇವನ ಪುತ್ರನಾದ ಸುಂದರೇಶನೂ ಇವನಂತೆಯೇ ವಿದ್ಯಾವಂತನು, ನೀತಿವಂತನು, ಗುಣವಂತನು. ತನ್ನ ಪುತ್ರಿಯನ್ನು ಲಗ್ನಮಾಡಿ ತನ್ನ ಪತಿಯ ಶಿಫಾರಸಿನಮೇಲೆ ಇವನಿಗೊಂದು ಉದ್ಯೋಗವನ್ನು ಮಾಡಿಸಿಕೊಟ್ಟು ಅಳಿಯನನ್ನೂ, ಮಗಳನ್ನೂ ತನ್ನ ಮನೆಯಲ್ಲಿಯೇ ಇಟ್ಟುಕೊಳ್ಳಬೇಕೆಂಬ ಅಭಿಪ್ರಾಯವು ಸ್ವರ್ಣಳಿಗೆ ಇತ್ತು. ತನ್ನ ಉದ್ದೇಶವನ್ನು ಸತೀಶನಿಗೆ ತಿಳಿಸುತ್ತಲೂ ಅವನೂ ಸ್ವರ್ಣಳ ಅಭಿಪ್ರಾಯವನ್ನೇ ಅನುಮೋದಿಸಿದನು. ಶಚೀಂದ್ರನಿಗೂ ಈ ವಿವಾಹವು ಒಪ್ಪಿದ್ದಿತು. ಇವರಲ್ಲಿ ಒಪ್ಪದಿದ್ದವಳು ಸತೀಶನ ತಾಯೊಬ್ಬಳೇ. ಇಷ್ಟು ಜನರೂ ಒಪ್ಪಿರುವುದರಿಂದ ಇಂದಿರೆಯನ್ನು ಸುಂದರೇಶನಿಗೆ ಧಾರೆಯೆರೆಯಬೇಕೆಂದು ನಿಶ್ಚೈಸಿದರು. ಅಂದಿನಿಂದ ಸುಂದರೇಶನು ರಜಕ್ಕೆ ಸೋದರತ್ತೆಯ ಮನೆಗೆ ಬಂದಾಗಲೆಲ್ಲಾ ಅವನನ್ನು "ಅಳಿಯ, ಅಳಿಯ," ಎಂದೇ ಕರೆಯುವರು. ಸ್ವರ್ಣಳ ಸಹಾಯಕ್ಕಾಗಿ ಅವಳ ತಾಯಿಯು ಪದೇಪದೇ ಬಂದು ಇರುವದುಂಟು. ಆಗ ಬಹುಕಾಲ ತನ್ನ ಅಜ್ಜಿಯ ಲಾಲನೆ ಪಾಲನೆಯಲ್ಲಿಯೇ ಬೆಳೆದ ಇಂದಿರೆಗೆ ತನ್ನ ಅಜ್ಜಿಯಲ್ಲಿ ಬಹಳ ಪ್ರೀತಿಯೂ ವಿಶ್ವಾಸವೂ ಉಂಟಾಯಿತು. ಆದುದರಿಂದ ಸ್ವರ್ಣಳ ತಾಯಿಯು ತಾನು ಕಲ್ಲೀಕೋಟೆಗೆ ಹೋಗುವಾಗ ತನ್ನ ಪೌತ್ರಿಯನ್ನೂ ಸಂಗಡಲೇ ಕರೆದುಕೊಂಡು ಹೋದಳು. ಅಂದಿನಿಂದ ತನ್ನ ಸೋದರಮಾವನ ಮನೆಯಲ್ಲಿಯೇ ವಿಶೇಷವಾಗಿ ಬೆಳೆಯಲಾರಂಭಿಸಿದಳು. ಹೊರಗೆಲ್ಲಾದರೂ ವಿನೋದವನ್ನು ನೋಡಲು ಹೋದರೆ ಸುಂದರೇಶನೇ ಇವಳನ್ನು ಎತ್ತಿಕೊಂಡು ಹೋಗುತ್ತಿದ್ದನು. ಹೆಚ್ಚು ಹೇಳಲೇ

ಕೆ? ಊಟಮಾಡುವಾಗಲೂ, ಆಟವಾಡುವಾಗಲೂ, ನಿದ್ರೆಮಾಡುವಾಗಲೂ, ಇಬ್ಬರೂ ಜೊತೆಯಲ್ಲಿಯೇ ಇರುತ್ತಿದ್ದರು. ಒಬ್ಬರನ್ನು ಬಿಟ್ಟು ಮತ್ತೊಬ್ಬರು ಯಾವ ಕೆಲಸವನ್ನೂ ಮಾಡುತ್ತಿರಲಿಲ್ಲ. ಹೀಗೆ 7—8 ವಯಸ್ಸಿನವರೆಗೂ ಇಂದಿರೆಯೂ, ಸುಂದರೇಶನೂ, ವಿವಾಹವಿಲ್ಲದೆಯೂ, ಭಾರ್ಯಾಭರ್ತೃಗಳೆಂಬ ಭಾವನೆಯುನ್ನೇ ನೆನಸದೆಯೂ, ಪ್ರಾಣಕ್ಕಿಂತ ಹೆಚ್ಚಾಗಿ ಒಬ್ಬರನ್ನೊಬ್ಬರು ಪ್ರೀತಿಸುತ್ತಿದ್ದರು.

ಈ ರೀತಿಯಾಗಿರುತ್ತಿರಲು ಒಂದುದಿನ ಸಾಯಂಕಾಲ ದೇವಾಲಯಕ್ಕೆ ಸ್ವಾಮಿ ದರ್ಶನಕ್ಕಾಗಿ ಹೋಗಿದ್ದ ಸುಂದರೇಶನ ತಂದೆಯು ಅಕಸ್ಮಾತ್ತಾಗಿ ಮೂರ್ಛೆಹೊಂದಿ ಬಿದ್ದರೆನ್ನುವ ವರ್ತಮಾನವನ್ನು ಕೇಳಿ ಸುಂದರೇಶನ ಚಿಕ್ಕಪ್ಪನೂ ಸುಂದರೇಶನೂ ಓಡಿಹೋಗಿ ಅವನನ್ನು ಮನೆಗೆ ಕರೆದುಕೊಂಡು ಬಂದು ಇಳಿಸುತ್ತಲೂ ಸುಂದರೇಶನ ತಂದೆಯು ಪರಂಧಾಮವನ್ನೈದಿದನು. ಎರಡು ವರ್ಷವಯಸ್ಸಿನಲ್ಲಿ ತಾಯಿಯನ್ನು ಕಳೆದುಕೊಂಡು ಈಗ ತಂದೆಯೂ ತನ್ನನ್ನು ತ್ಯಜಿಸಿಹೋದದ್ದನ್ನು ಕಂಡು ಪ್ರಿಯಪುತ್ರನು ಬಹಳವಾಗಿ ಮರುಗಿದನು; ತನ್ನಬಾಳೂ, ತನ್ನಪದವಿಯೂ, ತಾನುಜೀವಿಸಿರುವುದೂ ಎಲ್ಲವೂ ವ್ಯರ್ಥವೆಂದೇ ನಂಬಿದನು. ಆದರೂ ತಾಯಿಇಲ್ಲದ ಶಿಶುವಾದ ತನ್ನನ್ನು ಎತ್ತಿ ಪೋಷಿಸಿ ತನ್ನ ಜ್ಯೇಷ್ಠಪುತ್ರನನ್ನೂ ಬಲಿಕೊಟ್ಟು ಪ್ರಲಾಪಿಸುವ ಅಜ್ಜಿಯನ್ನೂ, ತನಗೆ ತಂದೆಗಿಂತ ಹೆಚ್ಚಾಗಿ ವಿದ್ಯೆಯನ್ನು ಕಲಿಸುತ್ತಿರುವ ತನ್ನ ಚಿಕ್ಕಪ್ಪನನ್ನೂ ನೆನಸಿ ಸಂತೈಸಿ, ಆಯಾಕಾಲದಲ್ಲಿ ನೆರವೇರಿಸಬೇಕಾದ ಶ್ರಾದ್ಧ ಕರ್ಮಗಳನ್ನು ಪೂರೈಸಿದನು. ದುಃಖಕ್ಕಾಗಿ ಬಂದಿದ್ದ ಸತೀಶನೂ ಸ್ವರ್ಣಳೂ ಇಂದಿರೆಯನ್ನು ತಾವು ಹೋಗುವಾಗ ಜೊತೆಯಲ್ಲಿಯೇ ಕರೆದುಕೊಂಡು ಹೋದರು.

ಇಂದಿರೆಗಾದರೋ ಸುಂದರೇಶನನ್ನೂ ಅಜ್ಜಿಯನ್ನೂ ಬಿಟ್ಟಿರಲು ಮನಸ್ಸೇ ಇಲ್ಲ. ಸುಂದರೇಶನಿಗೂ ಇಂದಿರೆಯನ್ನಗಲಲು ಸಮ್ಮತಿಇಲ್ಲ. ಆದರೂ ಅವಳು ತನಗೆ ಮುಂದೆ ಭಾರ್ಯೆಯಾಗುವ ಸಂಭವವಿರುವುದರಿಂದ ತನ್ನ ಮನಸ್ಸಿನ ಸಂತಾಪನ್ನು ಹೊರಪಡಿಸಲಿಲ್ಲ.

ಏನು ಮಾಡಿಯಾನು ? ಆಗತಾನೇ 6 ತಿಂಗಳಿಂದ ಓದುಬರಹವನ್ನು ಕಲಿಸುತ್ತಿದ್ದನು. ಇನ್ನೂ ಆರು ತಿಂಗಳಾದರೂ ಇದ್ದರೆ ಒಬ್ಬರನ್ನೊಬ್ಬರು ಅಗಲಿರುವ ಕಾಲದಲ್ಲಿ ಪತ್ರ ಬರೆಯುವುದಕ್ಕಾದರೂ ಮಾರ್ಗ ಉಂಟಾಗುತ್ತಿತ್ತು. ಅದಕ್ಕೂ ದಾರಿಯಿಲ್ಲ. ಯಾರಿಗೂ ಸನ್ನು ತಪ್ಪಿಲ್ಲವಿದ್ದರೂ ಸತೀಶನ ತಾಯಿಯ ಮೂರ್ಖತ್ವಕ್ಕಾಗಿ ಇಂದಿರೆಯನ್ನೂ ಸುಂದರೇಶನನ್ನೂ ಅಗಲಿಸಬೇಕಾಯಿತು.

ಸುಂದರೇಶನನ್ನಗಲಿದ್ದುದು ಮೊದಲು ಇಂದಿರೆಗೆ ಜ್ಞಾನವೆಲ್ಲಾ ಸುಂದರೇಶನ ಮೇಲೆಯೇ ಇತ್ತು. ಸುಂದರೇಶನೂ ಹೀಗೆಯೇ ಇರುವನು. ಆತನು ತನ್ನ ಪುಸ್ತಕಗಳಲ್ಲಿ ಉತ್ತಮ ಸ್ತ್ರೀಪುರುಷರ ವಿಷಯವಾಗಿ ಓದುವಾಗಲೆಲ್ಲಾ ತಾನೂ ಇಂದಿರೆಯೂ ಹೀಗೆಯೇ ಇರಬೇಕೆಂದು ನಿಶ್ಚೈಸಿಕೊಳ್ಳುವನು. ತಮ್ಮಿಬ್ಬರ ಮನಸ್ಸಿನಲ್ಲಿ ಹೀಗಿರುವುದನ್ನು ದೃಢವಾಗಿ ನಂಬಿದ್ದರೇ ಹೊರತು ವಿಧಿಯ ಲೀಲೆಯನ್ನು ಸ್ವಲ್ಪವೂ ಎಣಿಸಲೇ ಇಲ್ಲ. ಸತೀಶನ ತಾಯಿಯು ಯಾವ ಕಾರಣಕ್ಕಾಗಿ ಇವರನ್ನಗಲಿಸಿದಳೆಂಬುದನ್ನು ನೋಡೋಣ.

ತನ್ನ ಪೌತ್ರನಿಗೆ ಇಂದಿರೆಯನ್ನು ಕೊಡದಾಗಿ ಸತೀಶನ ತಾಯಿಯು ನಿರ್ಬಂಧ ಪಡಿಸುತ್ತಿದ್ದಳೆಂದು ಹಿಂದೆಯೇ ತಿಳಿಸಿತ್ತಷ್ಟೆ. ಮೊದಲೇ ಸತೀಶನ ತಾಯಿಗೂ ಸ್ವರ್ಣಳ ತಾಯಿಗೂ ಅಂತರಂಗ ವಿರೋಧವಿದ್ದಿತು. ಅವಳ ಬಳಿಯಲ್ಲಿ ತನ್ನ ಪೌತ್ರಿಯನ್ನು ಬಿಟ್ಟಿರುವುದು ಇವಳಿಗೆ ಸ್ವಲ್ಪವೂ ಇಷ್ಟವಿಲ್ಲ. ಇವಳ ಮೊಮ್ಮಗನಾದ ನಾರಾಯಣನಿಗೆ ಅವನ ಸೋದರತ್ತೆಯ ಮಗಳನ್ನು ಕೊಟ್ಟು ಲಗ್ನಮಾಡುವುದಾಗಿ ನಿಶ್ಚೈಸಿತ್ತು. ಇವನ ಕುರುಕು ಬುದ್ಧಿಯನ್ನೂ, ರೂಪ ಸೌಂದರ್ಯವನ್ನೂ ಅರಿತ ಇವನ ಸೋದರತ್ತೆಯ ಗಂಡನು ತನ್ನ ಮಗಳನ್ನು ಇವನಿಗೆ ಕೊಡದೆ ಬೇರೊಬ್ಬನಿಗೆ ಕೊಟ್ಟು ವಿವಾಹಮಾಡಿ ಬಿಟ್ಟನು. ಈ ವಿಷಯವನ್ನರಿತ ಸತೀಶನ ತಾಯಿಯು ಈ ಸಮಯದಲ್ಲಿಯೇ ಇಂದಿರೆಯನ್ನು ನಾರಾಯಣನಿಗೆ ಕೊಟ್ಟು ಲಗ್ನಮಾಡಿಬಿಡಬೇಕೆಂದು ಸತೀಶನಿಗೆ ಇಷ್ಟು ಬೋಧನೆಯನ್ನು ಮಾಡುತ್ತಿದ್ದಳು. ಕಲ್ಲಿಕೋಟೆಯಲ್ಲಿ ಸುಂದರೇಶನ ಸಂಗದ ಇಂದಿರೆಯನ್ನು ಬಿಟ್ಟು

ದ್ದರೆ ಅವರು ನಿಶ್ಚಯಿಸಿದಂತೆಯೇ ವಿವಾಹವು ನೆರವೇರುವುದೆಂದರಿತೇ
ಅವರಿಬ್ಬರನ್ನೂ ಅಗಲಿಸಿ ಕರೆದುಕೊಂಡು ಬಂದದ್ದು. ಅಗಲಿಸಿದ
ಮೂರು ತಿಂಗಳುಗಳಿಗೆಲ್ಲಾ ತನ್ನ ಪುತ್ರಿಯು ಗೃಹವನ್ನು ಸೇರಿ ಅವರಿ
ಷ್ಟದಂತೆ ನಾರಾಯಣನಿಗೆ ಇಂದಿರೆಯನ್ನು ವಿವಾಹ ಮಾಡಿಸುವುದಾಗಿ
ಪ್ರತಿಜ್ಞೆಮಾಡಿ ತನ್ನ ಅಳಿಯನನ್ನು ತನ್ನ ಮಗನಿಗೊಂದು ಪತ್ರ
ಬರೆಯ ಹೇಳಿ ಸತೀಶನಿದ್ದ ಸ್ಥಳಕ್ಕೆ ಹಿಂತಿರುಗಿದಳು.

ಇವಳು ಬಂದ ಎರಡು ತಿಂಗಳುಗಳಿಗೆಲ್ಲ ಸತೀಶನ ತಂಗಿಯ
ಗಂಡನಾದ ಉಪೇಂದ್ರನಿಂದ ಪತ್ರವೊಂದು ಬಂತು. ಆ ಪತ್ರವನ್ನು
ತನ್ನ ಪುತ್ರನಾದ ಶಚೀಂದ್ರನಿಗೆ ತೋರಿಸಿ ಈ ವಿವಾಹದಲ್ಲಿ ಅವನು
ಇಷ್ಟಪಡಲಿಲ್ಲವೆಂಬುದನ್ನು ಸತೀಶನು ತಿಳಿದುಕೊಂಡನು. ಶಚೀಂದ್ರ
ನು ಸತೀಶನ ಜ್ಯೇಷ್ಟಪುತ್ರನು, ಮಹಾಬುದ್ಧಿವಂತನು, ಪಿತೃವಾತ್ಸಲ್ಯ
ವುಳ್ಳವನು, ಚನ್ನಾಗಿ ಕಲಿತ ವಿವೇಕಿ, ಬಿ.ಎ., ಪರೀಕ್ಷೆಗೆ ಓದುತ್ತಿ
ದ್ದನು. ಮದರಾಸಿನಲ್ಲಿ ಓದುತ್ತಿದ್ದದ್ದರಿಂದ ಅಲ್ಲಿರುವ ಆಚಾರಪರಿ
ಷ್ಕರಣ ಸಂಘದವರೊಡನೆ ಸೇರಿ ನಮ್ಮ ಭರತಖಂಡವೂ, ಭಾರತೀ
ಯರೂ, ಇಷ್ಟೊಂದು ಹೀನಸ್ಥಿತಿಗೆ ಬರಲು ನಮ್ಮ ಹಿಂದೂಗಳ
ಮೌಢ್ಯವೇ ಕಾರಣವೆಂತಲೂ, ನಾವು ಇವುಗಳನ್ನು ತಿದ್ದಿ ಸರಿಪಡಿ
ಸಿದ ಹೊರತು ಅಭಿವೃದ್ಧಿ ಹೊಂದುವುದು ಅಸಾಧ್ಯವೆಂತಲೂ, ಅವು
ಗಳಲ್ಲಿ ಸ್ತ್ರೀ ವಿದ್ಯಾಭ್ಯಾಸ, ಬಾಲ್ಯವಿವಾಹ ಖಂಡನ, ಬಾಲವಿತಂತು
ಗಳನ್ನು ಅವರ ಪರಿತಾಪ ಸ್ಥಿತಿಯಿಂದ ನೀಗಿಸುವುದು ಇವೇ ಮೊದ
ಲಾದವುಗಳು ಮುಖ್ಯವಾದವುಗಳೆಂಬ ಅಭಿಪ್ರಾಯಪಟ್ಟನು.
ಆದುದರಿಂದ 9ನೇ ವಯಸ್ಸಿನಲ್ಲಿರುವ ತನ್ನ ಸಹೋದರಿಯನ್ನು ಹದಿ
ನಾರು ವಯಸ್ಸುಳ್ಳ ನಾರಾಯಣನಿಗೆ ಕೊಡಕೂಡದೆಂದು ತಂದೆ
ಯೊಂದಿಗೆ ವಾದಮಾಡಿದನು. ಸತೀಶನೂ ಮಹಾಪಂಡಿತನಾದ್ದ
ರಿಂದ ತನ್ನ ಮಗನು ಹೇಳಿದ ಕಾರಣಗಳನ್ನೆಲ್ಲ ಚೆನ್ನಾಗಿ ಪರಿಶೋ
ಲಿಸಿ ನೋಡಿ, ಅವನ ಆಕ್ಷೇಪಣೆಗಳನ್ನು ಚನ್ನಾಗಿ ಯೋಚಿಸಿ ಇಂದಿ
ರೆಗೆ ವಿವಾಹವನ್ನು ಅಷ್ಟು ಜಾಗ್ರತೆಯಲ್ಲಿಯೇ ಮಾಡುವುದಿಲ್ಲವೆಂದು
ತೀರ್ಮಾನಮಾಡಿದನು. ಈ ವಿಧವಾದ ತೀರ್ಮಾನದೊಂದಿಗೆ ತನ್ನ

ಸಹೋದರಿಯು ಗಂಡನಿಂದ ಬಂದ ಪತ್ರವನ್ನು ತಾಯಿಗೆ ಓದಿಹೇಳಿ ದನು. ಅವಳಿಗೆ ಪತ್ರವನ್ನು ಕೇಳುತ್ತಲೇ ಬಹಳ ಆನಂದವುಂಟಾ ಯಿತು. ಈ ವಿಷಯವನ್ನು ಕುರಿತ ಸಂಭಾಷಣೆಯು ಮಾತಾಪುತ್ರ ರಿಗೆ ನಡೆಯುತ್ತಿರುವ ಸಮಯದಲ್ಲಿಯೇ ನಮಗೆ ಪರಿಚಯವಾದದ್ದು. ತನ್ನ ತಾಯಿಯು ಹೇಳಿದ್ದನ್ನೆಲ್ಲ ಕೇಳಿದ ಸತೀಶನು ತನ್ನ ಸಹೋದ ರಿಯ ಪುತ್ರನಿಗೆ ಇಂದಿರೆಯನ್ನು ಕೊಡಬೇಕೆಂದು ತನ್ನ ತಾಯಿಯು ಹೇಳಿದ್ದನ್ನು ಕೇಳಿದನು. ಪಾಪ! ಏನುಮಾಡಿಯಾನು? ತಾನೋ ವಿದ್ಯಾವಂತನು, ಬಾಲ್ಯವಿವಾಹವನ್ನು ಮಾಡಕೂಡದೆಂಬ ಮತವುಳ್ಳವನು. ತನ್ನ ಪುತ್ರನಾದ ಶಚೀಂದ್ರನು ಬಾಲ್ಯ ವಿವಾಹ ಮಾಡಕೂಡದೆಂದು ಅನೇಕ ಕಡ ಹೇಳಿರುವನು. ತಾನು ತನ್ನ ಮಿತ್ರರಿಗೆಲ್ಲಾ ಬಾಲ್ಯ ವಿವಾಹವನ್ನು ಮಾಡಕೂಡದೆಂದು ಬೋಧಿ ಸುತ್ತಿರುವನು. ಇಷ್ಟಲ್ಲದೆ ತನ್ನ ಸಹೋದರಿಯ ಪುತ್ರನು ಮೂಢ ಶಿಖಾಮಣಿಯೆಂಬುದನ್ನು ಬಲ್ಲನು. ಅಂಥ ಮೂಢನಿಗೆ ಅತಿಪ್ರೇಮ ದಿಂದ ಸಾಕಿದ ಇಂದಿರೆಯನ್ನು ವಿವಾಹಮಾಡಿಕೊಡಲು ಸಮ್ಮತಿ ಯಿಲ್ಲ. ತನ್ನ ಪತ್ನಿಯಾದ ಸ್ವರ್ಣಳಿಗೆ ಅವಳ ಸಹೋದರನ ಪುತ್ರ ನಾದ ಸುಂದರೇಶನಿಗೆ ಕೊಡಬೇಕೆಂದು ಇಷ್ಟ. ಅವನು ಇಂದಿರೆಗೆ ತಕ್ಕ ವರನೇ ಸರಿ, ಎಲ್ಲರ ಇಷ್ಟವೂ ಹೀಗೆಯೇ ಮಾಡಬೇಕೆಂದಿತ್ತು. ತನ್ನ ತಾಯಿಯೊಬ್ಬಳಿಗೋಸ್ಕರ ನಾರಾಯಣನಿಗೆ ಕೊಡಬೇಕಾ ಗಿತ್ತು. ತನ್ನ ತಾಯಿಯು ವ್ಯಥೆಪಡುವುದನ್ನು ಮಾತ್ರ ಸತೀಶನು ಸಹಿಸಲಾರನು. ಆದುದರಿಂದ ತನ್ನ ತಾಯಿಯು ಕಣ್ಣೀರು ಸುರಿ ಸುವುದನ್ನು ಕಾಣುತ್ತಲೂ ಸತೀಶನು ಮನಕರಗಿದವನಾಗಿ, "ಅಮ್ಮ ನೀನು ವ್ಯಥೆಪಡಬೇಡ. ನಿನ್ನ ವ್ಯಥೆಯನ್ನು ಕಂಡರೆ ನನ್ನಪ್ರಾಣ ವು ಹೋಗುವುದು. ಆದುದರಿಂದ ನಿನ್ನಿಷ್ಟದಂತೆಯೇ ನಾರಾಯಣ ನಿಗೆ ಇಂದಿರೆಯನ್ನು ಕೊಡುತ್ತೇನೆಂದು ಹೇಳಿ ಕಾಗದವನ್ನು ಬರ ಯುವೆನು" ಎಂದನು. ತಾಯಿ:--ಮಗೂ. ಬೇಡವಪ್ಪಾ, ನಿನ್ನಿ ಷ್ಟದಂತೆಯೇ ಮಾಡಿ. ನಿನ್ನ ಹೆಂಡತಿಯೊಬ್ಬಳು ಚಿತ್ರಾಂಗಿ. ನಾನು ಹೇಳುವುದನ್ನು ನೀನು ಕೇಳಬೇಡ, ತರುವಾಯ ನಿನ್ನ ಹೆಂಡತಿಯು ನನ್ನನ್ನು ಸುಮ್ಮನೆ ಬಿಡಲಾರಳು.

ಸತೀಶ :—ಅಮ್ಮಾ, ಸುಮ್ಮನೆ ಯಾತಕ್ಕೆ ಅವಳನ್ನು ದೂಷಿಸುವೆ ? ಅವಳು ಇದುವರೆಗೂ ನಿನಗೆ ವಿರೋಧವಾಗಿ ಏನಾದರೂ ಹೇಳಿಯಾದರೂ ಅಥವಾ ಮಾಡಿಯಾದರೂ ಇರುವಳೇ ? ವಿವಾಹವನ್ನು ನಡೆಸುವುದಕ್ಕೆ ಅವಳೇನೂ ಆಕ್ಷೇಪಿಸಲಾರಳು. ನೀನು ಭಯಪಡತಕ್ಕ ಅವಶ್ಯಕವಿಲ್ಲ. '

ಎಂದು ಹೇಳುತ್ತಲೂ, ಸತೀಶನ ತಾಯಿಯು ಪರಮಾನಂದಭರಿತಳಾಗಿ ಸತೀಶನನ್ನು ಹೊಗಳುತ್ತಾ ತನ್ನ ಕಾರ್ಯವು ಕೈಗೂಡಿತೆಂದು ತಿಳಿದು ಹೊರಟುಹೋದಳು.

ತರುವಾಯ ಸತೀಶನು ಕೆಳಗೆ ಕಂಡಂತೆ ಯೋಚಿಸಲಾರಂಭಿಸಿದನು. "ಅಹಾ:-ನನ್ನ ವಿದ್ಯಾನುಭವವೂ ನನ್ನ ಸಮಾಜ ಪರಿಷ್ಕರಣ ಉದ್ದೇಶವೂ, ದೇಶಾಭಿವೃದ್ಧಿಯ ವಿಷಯದಲ್ಲಿ ಇರತಕ್ಕ ಅಭಿರುಚಿಯೂ, ಇತರರಿಗೆ ಬೋಧಿಸುತ್ತಿದ್ದ ಬೋಧನೆಯೂ, ನನ್ನ ಬುದ್ಧಿಯೂ, ಏನಾದವು ! ಎಲ್ಲಿ ಹೋದವು ? ಮಾತೃವಾತ್ಸಲ್ಯವನ್ನು ತೋರಿಸುವದಕ್ಕೆ ತಕ್ಕ ಸಮಯವು ಇದೇನೋ " ಎಂದು ತನ್ನನ್ನು ತಾನೇ ದೂಷಿಸಿಕೊಳ್ಳಲಾರಂಭಿಸಿದನು.

ಮೊದಲನೆಯ ಅಧ್ಯಾಯ ಸಂಪೂರ್ಣಂ.

---

# ಎರಡನೆಯ ಅಧ್ಯಾಯ.

## ಸಹೋದರ ಸಹೋದರಿಯರ ಸಂಭಾಷಣೆ.

ಕಾಳೀಮಣಿ:—ಉಪೇಂದ್ರಾ ! ಇಂದಿನಯ ತಂದೆಯಿಂದ ನಿನಗೆ ಪತ್ರವುಬಂದಿರುವುದೆಂದುಯಾರೋ ಹೇಳಿದ್ದನ್ನು ಕೇಳಿದೆನು. ನಿಜವೇ?

ಉಪೇಂದ್ರ:—ಹೌದು; ಅದನ್ನೇ ನಾನು ಈಗ ಓದುತ್ತಿದ್ದುದು.

ಕಾಶೀಮಣಿ:—ಏನು ವಿಷಯ ?

ಉಪೇಂದ್ರ:—ಹೌದು; ಇಂದಿರೆಯನ್ನು ನಮ್ಮ ನಾರಾಯಣನಿಗೆ ಕೊಡುವುದಾಗಿಯೂ ಯಾವಾಗ ವಿವಾಹ ಮುಹೂರ್ತವನ್ನು ನಿಶ್ಚಯಿಸೋಣವೆಂದು ನಮ್ಮನ್ನು ಕೇಳಲು, ನರೇಶನೇ ಬರೆದಿರುವನು.

ಕಾಶೀಮಣಿ:—ಸರಿಸರಿ, ನನಗೆ ಆಗಲೇ ಗೊತ್ತು. ನೀನೇನೋ ನಿಮ್ಮತ್ತೆ ಸಾಧಾರಣಳೆಂದು ತಿಳಿದಿರಬೇಡ; ಯಮಘಾತಕಿ. ತನ್ನ ಪೌತ್ರಿಯನ್ನು ಒಳ್ಳೇಸ್ಥಳದಲ್ಲಿ ಕೊಡಬೇಕೆಂದು ಆಶೆ. ಏನೋ ಒಂದು ಉದ್ದೇಶದಿಂದ ನರೇಶನನ್ನು ಈ ವಿವಾಹಕ್ಕೆ ಒಪ್ಪಿಸಿರುವಳು.

ಉಪೇಂದ್ರ:—ಹೌದು, ಅಕ್ಕಾ, ಇರಬಹುದು. ಈಗ ಎಲ್ಲಾ ಗೊತ್ತಾಯಿತು. ಇಲ್ಲವಿದ್ದರೆ ಇಷ್ಟು ಬೇಗ ನರೇಶನು ಪ್ರತ್ಯುತ್ತರವನ್ನು ಬರೆಯುವನೇ ? ಎಂದಿಗೂ ಇಲ್ಲ.

ಕಾಶೀಮಣಿ:—ನಾನು ತಾನೆ ಹೇಳುತ್ತಿರುವೆನಲ್ಲಾ. ಹಾಗೆಯೇ ಇರಬೇಕು.

ಉಪೇಂದ್ರನು ಪತ್ರವನ್ನು ಓದಿ ಮುಗಿಸುತ್ತಲೂ, "ಒಳ್ಳೇದು, ನಮ್ಮ ಮೂರ್ಖ ಶಿಖಾಮಣಿಗೆ ನರೇಶನು ತನ್ನ ಪುತ್ರಿಯನ್ನು ಕೊಡಲು ಇಷ್ಟು ಜಾಗ್ರತೆ ಸಮ್ಮತಿಸಿದನಲ್ಲಾ, ಇದೆಲ್ಲಾ ನಮ್ಮತ್ತೆಯ ತಂತ್ರದಿಂದಲೇ ನಡೆದಿರಬೇಕು." ಎಂದು ಎಣಿಸಿ ಪರಮಾನಂದಭರಿತನಾದನು.

ಈ ಉಪೇಂದ್ರನ ಸಹೋದರಿಯಾದ ಕಾಶೀಮಣಿಯ ಪರಿಚಯವನ್ನು ಇಲ್ಲಿಸ್ವಲ್ಪಮಟ್ಟಿಗೆ ತಿಳಿಸಬೇಕಾಗಿರುವುದು. ಈ ಕಾಶೀಮಣಿಯು ಉಪೇಂದ್ರನ ಜ್ಯೇಷ್ಠ ಸಹೋದರಿಯು. ಅವಳು ಆ ಊರಿನಲ್ಲಿಯೇ ಇದ್ದ ಒಬ್ಬ ವೈದಿಕ ಬ್ರಾಹ್ಮಣನನ್ನು ವಿವಾಹಮಾಡಿ ಕೊಂಡಿ

ದ್ದಳು. ವಿವಾಹವಾದ ಕೆಲವು ದಿನಗಳಿಗೆಲ್ಲ ಪತಿಯು ಪರಂಧಾಮವನ್ನೈದಿದನು. ಅಂದಿನಿಂದ ತನ್ನ ತಾಯಿಯ ಮನೆಯಲ್ಲಿಯೇ ನಿಂತಳು. ಕುಟುಂಬಕ್ಕೆ ಹಿರಿಯವಳಾದದ್ದರಿಂದಲೂ, ಪುತ್ರ ಭಾಗ್ಯವಿಲ್ಲದೆ ಬಾಲ್ಯದಲ್ಲಿಯೇ ಪತಿವಿಯೋಗವನ್ನು ಹೊಂದಿದವಳಾದದ್ದರಿಂದಲೂ, ಆ ಕುಟುಂಬದಲ್ಲಿರುವವರು ಯಾವ ಕಾರ್ಯವನ್ನೂ ಇವಳ ಅನುಮತಿ ಇಲ್ಲದೆ ಮಾಡುತ್ತಿರಲಿಲ್ಲ. ಅವಳು ಹೇಳಿದ್ದೇ ನಿಬಂಧನೆ. ಅವಳೇ ಅವಳ ಸಹೋದರರಿಗೆ ಮಂತ್ರಿ. ಅವಳು ಸ್ವಭಾವದಲ್ಲಿ ಮಹಾ ಕ್ರೂರಳು. ತನ್ನ ಸಹೋದರರ ವಿಷಯದಲ್ಲಿ ಸ್ವಲ್ಪ ವಿಶ್ವಾಸವುಳ್ಳವಳಾಗಿದ್ದರೂ ಅವರ ಪತ್ನಿಯರ ವಿಷಯದಲ್ಲಿ ಬಹಳ ಕಾಠಿಣ್ಯಳಾಗಿದ್ದಳು. ಅವರನ್ನು ಬಹಳ ಹಿಂಸೆಪಡಿಸುವಳು. ಇವಳ ಅಪ್ಪಣೆಯಿಲ್ಲದೆ ಅವರು ಗಂಡನೊಂದಿಗೆ ಕೂಡ ಮಾತನಾಡಕೂಡದು. ಅವರು ಹೊಟ್ಟೆ ತುಂಬಾ ಊಟಮಾಡುವದಕ್ಕೆ ಕೂಡ ಸಮ್ಮತಿಪಡಳು. ತಿಂಗಳಿಗೆ 27 ದಿನಗಳು ತಂಗಳನ್ನವನ್ನೂ, ಹಳಸಿದಹುಳಿಯನ್ನೂ ಅವರಿಗೆ ಬಡಿಸುವಳು. ಏನಾದರೂ ತಿಂಡಿಮಾಡಿದರೆ ಅದನ್ನು ತಾನು ಒಳಗಿಟ್ಟು ಬೀಗಹಾಕಿಕೊಂಡು ತನ್ನ ಸಹೋದರರಿಗೆ ಕೊಟ್ಟು ತಾನೂ ಸದಾ ತಿನ್ನುವಳು. "ಪಾಪ! ಇತರರ ಮನೇ ಹುಡುಗಿ, ಇತರರ ಮನೇ ಹುಡುಗಿ," ಎಂದು ಮಾತುಮಾತಿಗೂ ಅನ್ನುವಳು. ತಮ್ಮನ್ನು ನಂಬಿ ಅವರು ತಮ್ಮ ತಾಯಿತಂದೆಗಳನ್ನು ತ್ಯಜಿಸಿ ಬಂದಿರುವುದನ್ನು ಮಾತ್ರ ನೆನಸಳು. ಅಡಿಗೆಗೆ ಬೇಕಾದ ಪದಾರ್ಥಗಳನ್ನು ಉಗ್ರಾಣದಲ್ಲಿಟ್ಟು ಬೀಗಹಾಕಿ, ಅಡಿಗೆಯವನಿಗೆ ಪದಾರ್ಥಗಳನ್ನು ತೆಗೆದಿಡುವಂತೆ ತೆಗೆದಿಡುವಳು. ಹೀಗೆ ಮಾಡುವಾಗಲೇ ಅಕ್ಕಿ, ಬೇಳೆ ಪಥಾರ್ಥಗಳನ್ನು ತಿಂದು ಬಿಡುವುದಾಗಿಯೂ ದಿನ ಬಿಟ್ಟು ದಿನ ಎಣ್ಣೆಯೊತ್ತಿಕೊಂಡು ಸ್ನಾನಮಾಡಿ ಬಿಡುವುದಾಗಿಯೂ ರಗಳೆ ಮಾಡುವಳು. ಸದಾ ಸಹೋದರರೊಂದಿಗೆ ಚಾಡಿ ಹೇಳಿಕೊಂಡು ತಾನು ಈ ವಿಧಿಗೆ ಆಳಾಗಿ ಅವರುಗಳ ಮಧ್ಯೆ ಸಿಕ್ಕಿ ಇರುವುದರಿಂದಲ್ಲವೇ ಇಷ್ಟು ಹಿಂಸೆ ಪಡಿಸುತ್ತಾರೆಂದು ಗೋಳಾಡುವಳು. ಕಾಳೀಮಣಿಯು ಮಾತನಾಡುವುದರಲ್ಲೂ, ತಾನು ಹಿಡಿದ ಕಾರ್ಯವನ್ನು ಸಾಧಿಸುವದರಲ್ಲಿಯೂ ಬಹಳ ಸಮರ್ಥಳು. ಮತ್ತೊಂದುವೇಳೆ ಕೋಪದಿಂದ ಮಾತನಾಡುವಳು. ಇನ್ನೊಂ

ದುಸಲ ಕಣ್ಣೀರು ಸುರಿಸಿ ಗೋಳಾಡುವಳು. ಈ ರೀತಿಯಾಗಿ ಸಮಯಕ್ಕೆ ತಕ್ಕಂತೆ ಮಾತನಾಡಿ ಕಾರ್ಯ ಸಾಧಿಸಿಕೊಳ್ಳುವುದರಲ್ಲಿ ಪ್ರಸಿದ್ಧಳು. ಬಾಯಿತೆರೆದರ ಲಂಕಿಣಿ, ಶೂರ್ಪನಖಿಯಂತಿರುವಳು. ಯಾವಾಗ ನೋಡಿದರೂ ನನ್ನನ್ನು ದೂಷಿಸುವರಲ್ಲಾ ನನ್ನಂತೆಯೇ ಆಗಬೇಕು " ಎನ್ನುವಳು. ಈ ರೀತಿ ಕೋಮಲಸ್ವಭಾವವುಳ್ಳ ಕಾಳೀಮಣಿಯು ಮೊದಲನೇ ತಂತ್ರವಾದ ಕಣ್ಣೀರನ್ನು ಸುರಿಸಲು ಮೊದಲುಮಾಡಿದರ ಅವಳ ಪರಿತಾಪಸ್ಥಿತಿಯನ್ನೂ ಅವಳು ತಮಗೆ ಮಾಡುವ ಉಪಚಾರಗಳನ್ನೂ ನೋಡಿದ ಸಹೋದರರು ಅವಳ ಮಾತಿನಂತೆ ತಮ್ಮ ಹೆಂಡತಿಯರನ್ನು ಚೆನ್ನಾಗಿ ಪ್ರಹರಿಸುವರು. ಇವಳ ಮಿತ್ರಭೇಧದಿಂದಲೇ ಉಪೇಂದ್ರನ ಮೂರನೆಯ ಸಹೋದರನ ಹೆಂಡತಿಯನ್ನು ಕಾರಣವಿಲ್ಲದೆ ನಿವೃತ್ತಿಮಾಡಿ ಎರಡನೇ ಮದುವೆಯನ್ನು ಮಾಡಿಸಿದ್ದರು. ಮಕ್ಕಳನ್ನು ಸಾಕುವ ವಿಷಯದಲ್ಲಂತೂ ಹೇಳತೀರದು. ಒಬ್ಬಳ ಮಕ್ಕಳನ್ನು ಒಂದು ವಿಧವಾಗಿಯೂ, ಮತ್ತೊಬ್ಬಳ ಮಕ್ಕಳನ್ನು ಮತ್ತೊಂದು ವಿಧವಾಗಿಯೂ ನೋಡುವಳು. ಈ ವ್ಯತ್ಯಾಸವು ಇವಳ ಸಹೋದರರ ಪತ್ನಿಯರು ಇರುವ ಅನುಕೂಲಕ್ಕೆ ತಕ್ಕಂತೆ ಇರುವುದು. ಇವಳು ಮಾಡುವ ಇಷ್ಟೊಂದು ಅಕ್ರಮಗಳು ಸಹೋದರರಿಗೆ ತಿಳಿಯದು. ಗಂಡನೊಂದಿಗೆ ಮಾತನಾಡಲು ಹೆಂಡತಿಗೆ ಅವಕಾಶ ಸಿಕ್ಕಿದರಲ್ಲವೇ ಅವರಿಗೆ ತಿಳಿಯುವುದು ! ಇವಳ ಏರ್ಪಾಡಿನಿಂದಲೇ ಇವಳ ತಂಗಿಯ ಮಗಳನ್ನು ನಾರಾಯಣನಿಗೆ ಕೊಡಲು ತಪ್ಪಿದ್ದು. ಇಂಥಾ ಸಂಸಾರವು ಸುಖವಲ್ಲವೇ ?

ಇಂತಹ ಗುಣವಂತಳಾದ ಕಾಳೀಮಣಿಯು ಮೇಲೆ ಹೇಳಿದಂತೆ ಹೇಳುತ್ತಲೂ, ಉಪೇಂದ್ರನ ಮನಸ್ಸು ಬೇರೆಯಾಯಿತು.

ಉಪೇಂದ್ರ :—ಸರಿ ; ಈಗ ಈ ಕಾಗದಕ್ಕೆ ಏನುತ್ತರ ಬರೆಯುವುದು ?

ಕಾಳೀಮಣಿ :—ಏನು ಬರೆಯುವುದೇ. ಸಾವಿರ ರೂಪಾಯಿಗೆ ಉಡುದಾರವೂ, ಕಡಕೂ, 1000 ರೂಪಾಯಿ ವರದಕ್ಷಿಣೆಯೂ ಕೊಟ್ಟು ಹೊರ್ತು ವಿವಾಹವಾಗುವದು ದುರ್ಲಭವೆಂದು ಖಂಡಿತವಾಗಿ ಬರೆದುಬಿಡು. ದಾಕ್ಷಿಣ್ಯವೇನು ?

ಇವರು ಈ ರೀತಿ ಮಾತನಾಡುತ್ತಿರುವ ಸಮಯದಲ್ಲಿ ತನ್ನ ಸಹೋದರನ ಪುತ್ರಿಯನ್ನು ತನ್ನ ಪುತ್ರನಿಗೆ ಕೊಡುವುದಾಗಿ ಕಾಗದ ಬರೆದಿರುವನೆಂಬುದನ್ನು ಕೇಳಿ ಉಪೇಂದ್ರನ ಪತ್ನಿಯು, ಬಾಗಿಲ ಮರೆಯಲ್ಲಿ ನಿಂತಿದ್ದನ್ನು ಕಂಡ ಕಾಳೀಮಣಿಯು, "ಒಂದು ಬಿಟ್ಟೆಯಾ! ಅಣ್ಣನ ಮಗಳಿಗೆ ಮದುವೆಯೆನ್ನುವ ಸಮಾಚಾರವನ್ನು ಕೇಳಿ ನಾನೊಬ್ಬ ವಿಧವೆಯು ಇರುವುದನ್ನು ಕೂಡ ತಿಳಿಯದೆ ಹಗಲು ಹೊತ್ತಿನಲ್ಲಿ ಗಂಡನ ಇದಿರಿನಲ್ಲಿಯೇ ಬಂದು ನಿಂತಿರುವೆಯಲ್ಲ! ಇನ್ನು ಮದುವೆಯಾಗಿ ಬಿಟ್ಟರೆ ಆಮೇಲೆ ಗಂಡನನ್ನು ಕೂಡ ಲಕ್ಷ್ಯ ಮಾಡಲಾರೆ. ನಿನಗೆಷ್ಟು ಧೈರ್ಯವೇ" ಎಂದಳು. ಕಾಳೀಮಣಿಯ ಘೋರವಾಕ್ಯವನ್ನು ಕೇಳಿದ ಅವಳ ಅತ್ತಿಗೆಯು ಬಹಳ ಕೋಪಾವೇಶ ಹೊಂದಿದ್ದರೂ ತನ್ನ ಪತಿಗೆ ಹೆದರಿ ಬಾಯಲ್ಲಿ ಏನೋ ಗೊಣಗುಟ್ಟಿಕೊಂಡಳು. ಇದನ್ನು ಕಂಡ ಕಾಳೀಮಣಿಯು ಉಪೇಂದ್ರನನ್ನು ನೋಡಿ "ಕೇಳಿದೆಯಾ? ಇವಳು ಪತಕ್ಕೆ ನನ್ನನ್ನು ಈ ರೀತಿಯಾಗಿ ಪೀಡಿಸುವಳು. ನೀವು ಏನಾದರೆ ನನಗೇನು? ಹಾಗಾದರು ಹಾಳಾಗಿ" ಎಂದು ಕಾಳೀಮಣಿಯೆಂಬ ಹೆಸರಿಗೆ ತಕ್ಕಂತೆ ಕಾಳೀರೂಪವು ಆವೇಶಗೊಂಡವಳಂತೆ ಆರ್ಭಟಿಸಿದಳು.

ಇದನ್ನು ಕಂಡು ಸಹಿಸದ ಉಪೇಂದ್ರನು ಕೂಡಲೇ ಎದ್ದು ಮೂಲೆಯಲ್ಲಿದ್ದ ಕಸಪರಿಕೆಯನ್ನು ತೆಗೆದುಕೊಂಡು ತನ್ನ ಪತ್ನಿಯನ್ನು ಚನ್ನಾಗಿ ಪ್ರಹರಿಸಿದನು. ಪಾಪ! ಉಪೇಂದ್ರನ ಪತ್ನಿಯು ಎಷ್ಟು ದಿನ ತಾನೇ ಸಹಿಸಿಯಾಳು! ತಾನನುಭವಿಸುತ್ತಿರುವ ಕಷ್ಟಗಳನ್ನೆಲ್ಲ ಆದಿನ ತಾನೇ ಬಾಯಿಬಿಟ್ಟು ಹೇಳಿ ಗೋಳಾಡಿದಳು. ತನ್ನ ಗುಟ್ಟೆಲ್ಲ ಬಯಲಾದ್ದನ್ನರಿತ ಕಾಳೀಮಣಿಯು ಎಲ್ಲೋ ಮಾಯವಾದಳು. ಉಪೇಂದ್ರನು ಕೈಯಲ್ಲಿದ್ದ ಕಸಪರಿಕೆಯನ್ನು ಕೆಳಗೆ ಬಿಸಾಡಿ ತನ್ನ ಪತ್ನಿಯನ್ನು ಸಮಾಧಾನ ಪಡಿಸಿ ಎದ್ದು ಹೋಗಿ ಹೊರ ಜಗಲಿಯ ಮೇಲೆ ಕುಳಿತುಕೊಂಡನು.

ಮನೆಯಲ್ಲಿದ್ದ ಚಿಕ್ಕ ಸ್ತ್ರೀಯರು, "ಅತ್ತಿಗೆ! ಒಳ್ಳೆಯ ಕೆಲಸವನ್ನು ಮಾಡಿದೆ; ಇನ್ನು ಮುಂದೆ ಹಾಗೆಯೇ ಇರಬೇಕು;" ಎಂದು ಸ್ತೋತ್ರಮಾಡಲಾರಂಭಿಸಿದರು.

ಉಪೇಂದ್ರನ ಪತ್ನಿ:—ಮತ್ತೇನು, ನಿನ್ನೆ ಮೊನ್ನೆ ಮದುವೆಯಾದವರೆಲ್ಲ ಎಷ್ಟೋ ಸರಸಸಲ್ಲಾಪದಿಂದಿರುವರು, ನಾನು ನಾಲ್ಕೈದು ಮಕ್ಕಳನ್ನು ಹೆತ್ತಾಯಿತು, ಇನ್ನು ಇವಳ ಇದಿರಿನಲ್ಲಿ ಹಗಲಿನಲ್ಲಿ ಪತಿಯೊಂದಿಗೆ ಮಾತನಾಡಕೂಡದಂತೆ, ಇದೇನನ್ಯಾಯ ? ಇಷ್ಟು ದಿನ ತಡೆದು ತಡೆದು ನನಗೆ ಸಾಕಾಯಿತು. ನನ್ನ ಮಗನ ವಿವಾಹಕ್ಕೆ ಸಮ್ಮತಿಕೊಡಲು ನನಗೆ ಸ್ವತಂತ್ರವಿಲ್ಲವೇ ?

ಮುತ್ತೊಬ್ಬಳು:—ಏನು! ಆದಿರಲಿ, ಏನು ಕಾಗದಬಂತು, ಅದರ ವಿಷಯವೇನಾದರೂ ಗೊತ್ತುಂಟೇ ?

ಉಪೇಂದ್ರನ ಪ:—ಏನೋ ಅವರಿಗೆ ಗೊತ್ತು ! ಇದಕ್ಕೇ ಇಷ್ಟುವಾದಾಯಿತಲ್ಲ. ಇಷ್ಟರಲ್ಲಿ ಅದು ಬೇರೆ.

ಮುತ್ತೊಬ್ಬಳು:—ಏನೋ ಸಾವಿರ ರೂಪಾಯಿಗೆ ಉಡುವಾರವೂ, ಕಡಕೂ, ಸಾವಿರ ರೂಪಾಯಿ ವರದಕ್ಷಿಣೆಯೂ ಕೊಟ್ಟು ಹೊರತು ವಿವಾಹವಾಗುವದು ಸಿಂಹ ಸ್ವಪ್ನವೆಂದು ಬರೆಯಲುದ್ದೇಶಿಸಿರುವ ಹಾಗೆ ಕಾಣುತ್ತದೆ.

ಉಪೇಂದ್ರನ ಪ:—ನಿನಗೆ ಹ್ಯಾಗೆ ಗೊತ್ತು ?

ಮುತ್ತೊಬ್ಬಳು:—ನಾನು ಸ್ನಾನಮಾಡಿಕೊಂಡು ಬರುತ್ತಿರುವಾಗ ಅಕ್ಕನೂ, ತಮ್ಮನೂ ಮಾತನಾಡಿಕೊಳ್ಳುತ್ತಿದ್ದರು.

ಉಪೇಂದ್ರನ ಪ:—ಇವಳ ತಲೆ; ಸಾವಿರಕ್ಕೆ ಬದಲು ಎರಡು ಸಾವಿರ ರೂಪಾಯಿ ಕೊಡುತ್ತಾರಲ್ಲವೇ, ಇಲ್ಲಿ ನೋಡೇ. ಇವಳು ಏತಕ್ಕೆ ತಾನೆ ಇಷ್ಟು ಆಟವಾಡುವಳೋ ನಾನು ಬೇರೆಕಾಣೆ. ಚಿಕ್ಕತ್ತಿಗೆ ಮಗಳನ್ನು ನಾರಾಯಣನಿಗೆ ಕೊಡಬೇಕೆಂಬುದನ್ನು ತಪ್ಪಿಸಿದವಳು ಇವಳೇ ಅಲ್ಲವೇ ?

ಇವರು ಹೀಗೆ ಮಾತನಾಡುತ್ತಿರುವಾಗ ಕಾಳಿಮುಣಿಯು ಬಂದಿ ಜಗಲಿಯ ಮೇಲೆ ಕುಳಿತಿದ್ದ ಉಪೇಂದ್ರನ ಬಳಿಗೆಹೋಗಿ ಅವನಪತ್ನಿ ಯನ್ನು ಬಂದಧ್ಯಾಯ ದೂಷಿಸಿ, ತನ್ನಿಷ್ಟದಂತೆ ಸತೀಶನಿಗೆ ಪತ್ರ

ಬರೆಯ ಹೇಳಿದಳು. ಪತ್ರವೂ ಅದರಲ್ಲಿದ್ದ ಒಕ್ಕಣೆಗಳೂ ಕಾಶೀಮಣಿಯೇ ಹೇಳಿಬರೆಸಿದಳು. ಪತ್ರದ ವಿಚಾರ:—

ಕಲ್ಕತ್ತಾ,

ಚಿ|| ಸತೀಶನಿಗೆ ಮಾಡುವ ಆಶೀರ್ವಾದಗಳು.

ಇಲ್ಲಿ ಮಕ್ಕಳೊಡನೆ ಸರ್ವರೂ ಕ್ಷೇಮ. ಅಲ್ಲಿ ನಿಮ್ಮ ಕ್ಷೇಮಾತಿಶಯಕ್ಕೆ ಬರೆಸಬೇಕಾಗಿ ಪ್ರಾರ್ಥಿಸುತ್ತೇನೆ.

ನೀನು ಬರೆದ ಪತ್ರಬಂದುತಲಪಿ ಸಕಲವೂ ಅಭಿಪ್ರಾಯವಾಯಿತು. ವಿವಾಹಕ್ಕೆ ನೀನು ಒಪ್ಪಿರುವುದು ನಮಗೆಲ್ಲಾ ಆನಂದವೇ; ನಿಮ್ಮ ತಾಯಿಯು ಹೇಳಿದ್ದಕ್ಕಾಗಿ ಇಷ್ಟು ದೂರ ಬರೆಯ ಬೇಕಾಗಿರುವುದು. ಈಗ ಚಿ|| ನಾರಾಯಣನಿಗೆ ಇಲ್ಲಿರುವ ಶ್ರೀಮಂತರೊಬ್ಬರು ಎರಡು ಸಾವಿರ ರೂಪಾಯಿ ವರದಕ್ಷಿಣೆ ಕೊಡುವುದಾಗಿಯೂ ತಕ್ಕ ಮಟ್ಟಿಗೆ ಪಾತ್ರೆಗಳನ್ನು ಕೊಡುವುದಾಗಿಯೂ ಹೇಳಿದರು. ನಮ್ಮಲ್ಲೇನಾವು ಸಂಬಂಧ ಬೆಳೆಸಿಕೊಳ್ಳ ಬೇಕಾಗಿರುವುದರಿಂದ ಸಾವಿರ ರೂಪಾಯಿಗೆ ಕಡುಕು, ಉಡುದಾರಗಳನ್ನೂ, ಸಾವಿರ ರೂಪಾಯಿ ವರದಕ್ಷಿಣೆಯನ್ನೂ ಕೊಟ್ಟರೆ ಸಾಕಾಗಿರುವುದು. ಇದರ ಮೇಲೆ ನೀವು ಏನುಮಾಡಿದರೂ ನಿಮ್ಮ ಮಕ್ಕಳ ಮೇಲಿರುವ ಅಭಿಮಾನಕ್ಕೆ ತಕ್ಕಂತೆ ಇರುವುದೆಂದು ಅಕ್ಕನಾದ ಕಾಶೀಮಣಿಯು ಹೇಳುವಳು. ಆದರೆ ನನಗೆ ಮಾತ್ರ ಇದು ಇಷ್ಟವೇ ಇಲ್ಲ. ಈ ಪದ್ಧತಿಯು ಈಗ ಎಲ್ಲೆಲ್ಲಿಯೂ ವಿಶೇಷವಾಗಿರುವುದರಿಂದಲೂ, ನಮ್ಮ ಅಕ್ಕನು ನಿರ್ಬಂಧ ಪಡಿಸುತ್ತಿರುವುದರಿಂದಲೂ ಇಷ್ಟು ದೂರ ಬರೆಯಬೇಕಾಯಿತು. ಇದಕ್ಕೆ ಒಪ್ಪದಿದ್ದರೆ ಮದುವೆಯ ಪ್ರಸ್ತಾಪವನ್ನೇ ನಿಲ್ಲಿಸಿಬಿಡಬಹುದು. ಆದರ ನನಗೆ ಹಣದಾಸೆ ಹಿಡಿದಿರುವುದೆಂದು ತಿಳಿಯಬೇಡ. "ಅರ್ಥಮನರ್ಥಂ" ಎಂದು ಆಚಾರಸ್ವಾಮಿಗಳೇ ಹೇಳಿರುವರು. ಇದ್ದರೂ ನನಗೆ ಅಗತ್ಯಬೇಕು (ಹಣ)

| | |
|---|---|
| ನಂದನ ವರ್ಷ | ಅನೇಕ ಆಶೀರ್ವಾದಗಳು. |
| ಚೈತ್ರಬಹುಳ | **ಉಪೇಂದ್ರ.** |

ಈ ಪತ್ರವನ್ನು ಹೊಂದಿದ ಸತೀಶನು ತನ್ನ ಭಾವನು ಅವಮಾನ ನಡಿಸಿದ್ದಾಗಿ ತಿಳಿದು ಕೋಪಾವೇಶವುಳ್ಳವನಾಗಿ ಏನು ಮಾಡಬೇಕೆಂಬುದನ್ನರಿಯದೆ ತನ್ನ ತಾಯಿಗೆ ಓದಿ ಹೇಳಿದನು. ಮಗನ ಕೋಪವನ್ನರಿತ ತಾಯಿಯು, "ಹಾ! ಬೇರೆ ಬೇಕೇ? ಇವನ ಮಗನ ಬುದ್ಧಿಯನ್ನು ಮೆಚ್ಚಿ ಯಾರು ಎರಡು ಸಾವಿರ ರೂಪಾಯಿಗಳನ್ನು ಕೊಡುವರು?" ಎಂದಳು.

ತನ್ನ ತಾಯಿಗೆ ಇಷ್ಟವಿಲ್ಲವೆಂಬುದನ್ನರಿತ ಸತೀಶನು ಕೋಪವನ್ನಡಗಿಸಿಕೊಂಡು ನಾರಾಯಣನಿಗೆ ಇಂದಿರೆಯನ್ನು ಕೊಡುವದಿಲ್ಲವೆಂಬ ತೀರ್ಮಾನದಿಂದ ತಾಯಿಯೊಂದಿಗೆ ಸಾಧಾರಣವಾಗಿ ಮಾತನಾಡುತ್ತಿರುವಾಗ ತಾಯಿಯು ಮಗನನ್ನು ಕುರಿತು "ಸತೀಶ, ಎಲ್ಲಿ ಪತ್ರವನ್ನು ಪುನಃ ಓದು, ನೋಡೋಣ" ಎಂದಳು

ಸತೀಶನು ಅದರಂತೆಯೇ ಓದಿದನು. ಕಾಗದವನ್ನು ಪೂರ್ತಿಯಾಗಿ ಕೇಳಿದಮೇಲೆ "ಯಾವನಾದರೂ ಕೊಳ್ಳುವವನಿದ್ದರೆ ಅವನು ಬೇಕಾದರೆ ಎರಡು ಸಾವಿರ ರೂಪಾಯಿ ವರದಕ್ಷಿಣೆ ಕೊಡಬಲ್ಲನು" ಎಂದನು. ಸತೀಶನ ತಾಯಿ: ಇನ್ನೇನು ಕೊಡುತ್ತಾರೆಂದು ಬರೆದಿದ್ದಾನೆ?

ಸತೀಶ:—ಅದೇನೋ ಅದುಮಾತ್ರ ಬರೆದಿಲ್ಲ.

ತಾಯಿ:—ಅವನು ಇನ್ನೂ ಹೆಚ್ಚಾಗಿ ಬೇಕಾದರೆ ಕೊಡಬಹುದು.

ಸತೀಶ:—ಅಮ್ಮಾ; ನಿನಗೆಲ್ಲೋ ಹುಚ್ಚು, ಇವನ ಮಗನು ಓದಿರುವ ಪರೀಕ್ಷೆಗೂ ಬುದ್ಧಿವಂತಿಕೆಗೂ ಮೆಚ್ಚಿ ಯಾವನು ಎರಡು ಸಾವಿರ ರೂಪಾಯಿಗಳನ್ನು ಕೊಡುವನು.? ರೂಪಾಯಿಗಳೇನು ಕಲ್ಲುಗಳೋ, ಬೋಕಿಗಳೋ.

ತಾಯಿ:—ಮಗೂ, ಹಾಗಲ್ಲ, ಈಗ ತಾನೆ ಕನ್ನಿಕೆಯರು ಕಾಸಿಗೆರಡು ಕೊಸರಿಗೊಂದಾಗಿರುವರು. ಒಬ್ಬನು ಸಾವಿರ ಕೊಡುತ್ತೇನೆಂದರೆ ಇನ್ನೊಬ್ಬನು ಸಾವಿರದೈನೂರು ಮತ್ತೊಬ್ಬನು ಎರಡು ಸಾವಿರ ಕೊಡುತ್ತೇನೆಂದು ಹರಾಜು ಹಾಕುತ್ತಾನೆ.

ಸತೀಶ :—ಹಾಗೆ ಕೊಡುವುದಕ್ಕೆ ನಿನ್ನ ಮೊಮ್ಮಗನ ಮಹಿಮೆಯೊಂದೇ ಸಾಕಲ್ಲವೇ ?

ತಾಯಿ :—ಹೇಗೂ ನಾಲ್ಕಕ್ಷರ ಕಲಿತಿರುವನು, ಅದೇ ಸಾಲದೇ ?

ಸತೀಶ :—ನಿನ್ನ ಮೊಮ್ಮಗನು ಕಲಿತಿರುವುದನ್ನು ನೀನೇ ನೋಡಬೇಕು. ಮೂರುವರ್ಷಗಳಿಂದ ಐದು ರೂಪಾಯಿ ಪರೀಕ್ಷೆಗೆ ಓದುತ್ತಿರುವನು. ಇನ್ನೂ ತೇರ್ಗಡೆಯಾದದ್ದು ಬೇರೇ ಕಾಣೆ, ಕಲಿತಿದ್ದಾನಂತೆ ವಿದ್ಯೆಯನ್ನು. ಹಾಗೆ ನೋಡಿದರೆ ಸ್ವರ್ಣಳ ಅಣ್ಣನಮಗ ಸುಂದರೇಶನು ಎಷ್ಟು ಪರೀಕ್ಷೆಗಳನ್ನು ತೇರ್ಗಡೆಯಾಗಿರುವನು ಅವನಿಗೇ ಎರಡು ಸಾವಿರ ರೂಪಾಯಿಗಳನ್ನು ಕೊಟ್ಟರೆ ಒಂದು ಕುಟುಂಬವನ್ನೆ ಮುಂದಕ್ಕೆ ತಂದಹಾಗಾಗುವದು. ಸತ್ಪಾತ್ರ, ಸಾರ್ಥಕವುಂಟು.

ತಾಯಿ:—ಅವನಿಗೂ ಇವನಿಗೂ ಸರಿಹೇಳುವೆಯಲ್ಲಾ, ಅವನಿಗೇನಿರುವದು, ಹಗಲು ಸತ್ತರೆ ಅಕ್ಕಿಗೆ ಗತಿಯಿಲ್ಲ; ರಾತ್ರಿಸತ್ತರೆದೀಪಕ್ಕೆ ಎಣ್ಣೆಗೆ ಗತಿಯಿಲ್ಲ. ಬಾಯಿಯಲ್ಲಿ ಹಾಕಿಕೊಳ್ಳಲು ಒಂದು ಹಿಡಿ ಅವಲಕ್ಕಿಗೂ ಕೂಡ ಗತಿಯಿಲ್ಲ. ಇವನು ಓದದಿದ್ದರೂ ಊಟಮಾಡುವುದಕ್ಕಾದರೂ ಮಾರ್ಗವಿರುವುದು. ನಾಳೆ ಇಂದಿರೆಯು ಕಣ್ಣು ಹಿಸುಕಿಕೊಳ್ಳದಿರಬಹುದು.

ಸತೀಶ:—ಹಾಗೆ ನೋಡ ಹೋದರೆ ಎಲ್ಲರ ಯೋಗ್ಯತೆಯೂ ಅಷ್ಟರಲ್ಲೇ ಇರುವದು. ನಮಗೆ ಈ ಹೊತ್ತು ಉದ್ಯೋಗ ಹೋದರೆ ನಾಳೆ ಭೋಜನಕ್ಕೇನು ಗತಿ ! ಮನೆಯೇ, ಮಠವೇ, ಏನಿರುವುದು ?

ತಾಯಿ:—ಏನಿದ್ದರೂ ಹಗಲು ಸತ್ತರೆ ಹೆಣದಬಾಯಿಗೆ ಹಾಕಲು ಅಕ್ಕಿಗೂ ರಾತ್ರಿ ಸತ್ತರೆ ದೀಪಕ್ಕೆ ಎಣ್ಣೆಗೂ ಮಾರ್ಗವಿಲ್ಲದಿರುವನಿಗೆ ಕೊಡಲು ನನ್ನ ಮನಸ್ಸು ಸ್ವಲ್ಪವೂ ಒಪ್ಪದು. ನೀನೇನು ಬೇಕಾದರೂ ಹೇಳು.

ಸತೀಶ:—ಅಮ್ಮಾ ! ನಿನ್ನ ಮೌಢ್ಯಕ್ಕೆ ನಾನೇನು ಹೇಳಲಿ ? ಸಾಯುವುದೆಂದೇ ಏರ್ಪಟ್ಟ ಮೇಲೆ ಅಕ್ಕಿ ಇಲ್ಲದಿದ್ದರೇನು? ಎಣ್ಣೆ ಇಲ್ಲ

ಬಿದ್ದರೇನು ? ಇರುವವರೆಗೂ ನಮ್ಮ ಇಂದಿರೆಯು ಬುದ್ಧಿವಂತನಾದ ಪತಿಯೊಂದಿಗೆ ಸಂಸಾರ ಮಾಡಲೆಂಬುದೇ ನನ್ನ ಇಷ್ಟ.

ತಾಯಿ:—ನಿನ್ನಿಷ್ಟವು ಹೇಗೋ ಹಾಗೆಯೇ ಮಾಡು.

ಸತೀಶ:—ಕೋಪಿಸಿಕೊಳ್ಳುವೆಯಲ್ಲಾ; ಇದಕ್ಕೆ ನಾನೇನು ಮಾಡಲಿ ? ನಿನ್ನಿಷ್ಟವನ್ನು ನೆರವೇರಿಸೋಣವೆಂದರೆ ಅವರು ಎರಡು ಸಾವಿರ ರೂಪಾಯಿಗಳನ್ನು ಕೇಳುವರು. ನಾನ್ನೆಲ್ಲಿಂದ ತರಲಿ ? ಯಾರ ಮನೆಯಲ್ಲಾದರೂ ಕನ್ನವಿಡಬೇಕೇ ಹೊರತು ಬೇರೆ ಮಾರ್ಗವೇ ಇಲ್ಲ.

ತಾಯಿ:—ಈ ಕಾಲದಲ್ಲಿ ಏನೂ ಇಲ್ಲದವರಿಗೆ ಕೂಡ ಎರಡು ಮೂರು ಸಾವಿರ ರೂಪಾಯಿ ವರದಕ್ಷಿಣೆ ಕೊಡುತ್ತಿರುವರು. ನಾರಾಯಣನಿಗೇನು, ಮಹಾರಾಯ ! ಪುಣ್ಯವಂತ.

ಸತೀಶ:—ಹೇಗಾದರೂ ಮಾಡಿ ಹೆಣ್ಣು ಕೊಟ್ಟರೆ ಸಾಕೆಂದು ಹೇಳುತ್ತಿದ್ದ ಉಪೇಂದ್ರನು ಈಗ ಎರಡು ಸಾವಿರ ರೂಪಾಯಿ ಕೇಳುವನು.

ತಾಯಿ:—ನಾನು ಹೇಳುವುದನ್ನು ಕೇಳು. ಆ ಉಪೇಂದ್ರನೇನೋ ಒಳ್ಳೆಯವನು. ಬಹುಶಃ ಅವನೇನೋ ರೂಪಾಯಿ ಕೇಳಿರಲಾರನು. ಇದೆಲ್ಲಾ ಕಾಶೀಮಣಿಯ ತಂತ್ರವಾಗಿರಬೇಕು. ಉಪೇಂದ್ರನನ್ನು ಹೇಳುವುದರಲ್ಲಿ ಏನೂ ಪ್ರಯೋಜನವಿಲ್ಲ.

ಸತೀಶ:—ಅಮ್ಮಾ ! ಇದೆಲ್ಲಾ ಬರೀ ಮಾತು. ಹಣಬರುವುದೆಂದರೆ ಹೆಣವೂ ಬಾಯಿಬಿಡುವುದು. ಗೌರವವಾಗಿ ತನಗೆ ಇಷ್ಟವಿಲ್ಲವೆಂತ ಹೇಳಿಕೊಂಡು ಮನೆಯಲ್ಲಿ ಯಾರಾದರೂ ಬೇಡದ ಹೆಂಗಸಿದ್ದರೆ ಅವರ ತಲೆಯಮೇಲೆ ಪಾಪ! "ಅನಿಷ್ಟಕ್ಕೆ ಶನೀಶ್ವರ ಗುರಿ" ಎಂಬಂತೆ ಈ ದೂರನ್ನು ಹೊರಿಸುವುದು. ಅದು ಹೋಗಲಿ. ಈಗ ರೂಪಾಯಿಗೆ ಎಲ್ಲಿ ಹೋಗುವುದು ?

ತಾಯಿ:—ಈ ಮನೆಯ ಮೇಲೆ ಎರಡು ಸಾವಿರ ರೂಪಾಯಿ ಕೊಟ್ಟಿರುವೆಯಲ್ಲಾ; ಅದನ್ನು ತೆಗೆದು ಕೊಡು. ಇದಕ್ಕಿಲ್ಲದ ಹಣ ಇನ್ನೇತಕ್ಕೆ ?

ಸತೀಶ:—ಹೌದಮ್ಮಾ ! ಈ ಹಣವನ್ನು ಜಂಗರ ವಶಕ್ಕೆ ಕೊಟ್ಟು ಬಿಟ್ಟರೆ ಮದುವೆಯ ಖರ್ಚಿಗೆ ಏನು ಮಾಡುವುದು ?

ತಾಯಿ:—ಮದುವೆಗೆ ಏನು ಖರ್ಚಾದೀತು ! ನೂರು ರೂಪಾಯಿಗಳಿದ್ದರೆ ಮದುವೆ ತೀರಿತು.

ಸತೀಶ:- ಅದು ಹೇಗೆ ಆಗುವುದು ?

ತಾಯಿ:—ಅಯ್ಯೋ, ಅಪ್ಪಾ ! ನಾನು ಹೇಳುವುದನ್ನು ಕೇಳು. ಈಗತಾನೇ ಆ ಬೀದಿಯಲ್ಲಿ ನಮ್ಮ ಬಳಗದವರ ಮನೆಯಲ್ಲೊಂದು ಮದುವೆಯಾಯಿತಲ್ಲಾ. ಅದರಲ್ಲಿ ನಾನೂರು ರೂಪಾಯಿ ವರದಕ್ಷಿಣೆ ಕೊಟ್ಟರು. ಮದುವೆ ಹೇಗೆಮಾಡಿದರೆಂದು ಬಲ್ಲೆಯಾ? ಅನ್ನಕ್ಕೆ ಕೊಬರೀ ಎಣ್ಣೆಯನ್ನೂ ತುಪ್ಪವನ್ನೂ ಕಲಸಿ ಹಾಕಿದರು. ಏತಕ್ಕೆ ಹೀಗೆ ಮಾಡಿದಿರೆಂದು ಕೇಳಿದ್ದಕ್ಕೆ ಎಲ್ಲಕ್ಕೂ ನಾನೂರು ರೂಪಾಯಿ ತೆಗೆದುಕೊಂಡಿರಲ್ಲಾ ಎಂದರು. ನಾನೂರಕ್ಕೆ ಹೀಗಾದರೆ ನಾವು ಕೊಡುವ ಎರಡುಸಾವಿರಕ್ಕೆ ಇನ್ನೆಷ್ಟು ಮಾಡಬಹುದು ಹೇಳು, ನೋಡೋಣ?

ಸತೀಶ :—ಅದು ನಮ್ಮ ಗೌರವಕ್ಕೆ ತಕ್ಕದ್ದಲ್ಲ. ಮಾಡಿದರೆ ಸರಿಯಾಗಿ ಮಾಡಬೇಕು. ಇಲ್ಲವಿದ್ದರೆ ಸುಮ್ಮನಿರಬೇಕು. ಹೀಗೆ ಕಾಟದ ಮದುವೆ ಮಾಡಲಿಲ್ಲವೆಂದು ಆಕ್ಷೇಪಿಸುವರಾರು ?

ತಾಯಿ :—ಏನೋ ಅಪ್ಪಾ ! ನಿನ್ನಿಷ್ಟ. ಸೃಷ್ಟಿಸಿದ ದೇವರು ಹೇಗೂ ಹುಲ್ಲು ಮೇಯಿಸುವನು. ನಾರಾಯಣನನ್ನು ಮಾತ್ರ ಕೈ ಬಿಡಬೇಡ.

ಹೀಗೆ ಹೇಳಿ ತನ್ನ ಪ್ರಯತ್ನವು ನೆರವೇರಿತೆಂದು ತಿಳಿದು ಸತೀಶನ ತಾಯಿಯು ಸಂತೋಷದಿಂದ ಎದ್ದು ಹೊರಟು ಹೋದಳು. ನಾರಾಯಣನಿಗೆ ಇಂದಿರೆಯನ್ನು ಕೊಡುವುದೇ ಇಲ್ಲವೆಂದು ಹಠಗೊಂಡಿದ್ದ ಸತೀಶನು ತಾಯಿ ಬೋಧನೆಯಿಂದ ಅವನಿಗೆ ಕೊಡುವುದಕ್ಕೊಪ್ಪಿದ್ದಲ್ಲದೆ ಎರಡುಸಾವಿರ ರೂಪಾಯಿಗಳನ್ನು ಸಾಲ ಮಾಡಿಯಾದರೂ ವರದಕ್ಷಿಣೆ ಕೊಡಬೇಕೆಂದು ತೀರ್ಮಾನಮಾಡಿಕೊಂಡನು. ಈ ಪ್ರಸ್ತಾಪವೇರ್ಪಟ್ಟುದು ಮೊದಲು ಮನೋವ್ಯಥೆಯಿಂದಿದ್ದ ಸ್ವರ್ಣಳು ಒಂದು ವೇಳೆ ತನ್ನ ಮನೋರಥವು ಕೈಗೂಡುವುದೇನೋ ಎಂದಿದ್ದ ಆಶೆಯೂ ಹೋಗಿ ಇನ್ನೂ ವ್ಯಸನಾಕ್ರಾಂತಳಾದಳು.

ಇದನ್ನು ಕೇಳಿದ ಶಚೀಂದ್ರನ ಮನಸ್ಸಿನ ಸ್ಥಿತಿಯನ್ನು ವರ್ಣಿಸಲು ಸಾವಿರ ನಾಲಿಗೆಯುಳ್ಳ ಆದಿಶೇಷನಿಂದಲೂ ಅಳವಲ್ಲ. ತನ್ನ

ಸಹೋದರಿಗೆ ಬಾಲ್ಯ ವಯಸ್ಸಿನಲ್ಲಿ ವಿವಾಹ ಮಾಡಲು ಸಮ್ಮತಿಸನು. ಆದರಲ್ಲೂ ಬಹಳ ದಿನಗಳಿಂದ ನಿಶ್ಚಯವಾಗಿದ್ದ ಬುದ್ಧಿವಂತನಾದ ಸುಂದರೇಶನನ್ನು ಬಿಟ್ಟು ಈ ಮೂಢಶಿಖಾಮಣಿಯಾದ ನಾರಾಯಣನಿಗೆ ಕೊಡಬೇಕೆಂದರೆ ಅವನಿಗೆ ಸ್ವಲ್ಪವೂ ಇಷ್ಟವಿರಲಿಲ್ಲ. ಕನ್ಯಾದಾನ ಮಾಡುವುದಲ್ಲದೆ ಸಾವಿರಾರು ರೂಪಾಯಿ ಸುರಿಯಬೇಕೆಂಬುದನ್ನು ಕೇಳಿ ಬಹಳ ವ್ಯಾಕುಲ ಹೊಂದಿದನು. ವರದಕ್ಷಿಣೆಗೆ ಇವನು ಪರಮ ವೈರಿ. ತನ್ನ ವಿವಾಹದಲ್ಲಿಯೂ ಹೀಗೆಯೇ ಒಂದು ಕಾಸೂ ಕೂಡ ವರದಕ್ಷಿಣೆ ತೆಗೆದುಕೊಳ್ಳದೆ ನಡೆಸಿದನು. ಈ ವಿವಾಹದಲ್ಲಿ ತನ್ನ ತಂದೆ ಸಂಪಾದಿಸಿದ್ದ ಹಣವೂ ಹೋಗಿ ಇನ್ನೂ ಸಾಲ ಮಾಡಬೇಕಾಗುವುದೆಂಬುದನ್ನು ನೆನೆದು ಬಹಳ ಮರುಗಿದನು. ಇಷ್ಟಕ್ಕೂ ತನ್ನ ಅಜ್ಜಿಯೇ ಕಾರಣಳೆಂದು ಅವಳನ್ನು ದೂಷಿಸಿದನು. ಈ ವಿಷಯದಲ್ಲಿ ಮಾತೃವಾತ್ಸಲ್ಯವನ್ನು ತೋರಿಸಿದ ತನ್ನ ತಂದೆಗಾಗಿ ಬಹಳ ವ್ಯಾಕುಲಪಟ್ಟನು. ಏನಾದರೇನು ? ತನ್ನ ತಂದೆಯ ಇದಿರಿನಲ್ಲಿ ನಿಂತು ವಾದಿಸಲು ಧೈರ್ಯಸಾಲದು. ಏನೋ ! ನಡೆದದ್ದು ನಡೆದು ಹೋಯಿತು. ನಡೆದು ಹೋದ ಕಾರ್ಯಕ್ಕೆ ಚಿಂತಿಸಿ ಫಲವೇನು? "ಅದೃಷ್ಟ" "ಹಣೆಯ ಬರಹ" ಎಂದು ಇತರರು ಹೇಳಿದರೆ ಅವರನ್ನು ಪರಿಹಾಸ ಮಾಡುತ್ತಿದ್ದ ಶಚೀಂದ್ರನು ತಾನೂ ಅದನ್ನು ನಂಬಿದವನಾಗಿ, ಇನ್ನು ಮೇಲೆ ವಿವಾಹಕ್ಕೆ ಮಾಡತಕ್ಕ ಖರ್ಚುಗಳನ್ನಾದರೂ ಕಡಿಮೆ ಮಾಡ ಹೇಳಿ ತಂದೆಯೊಂದಿಗೆ ವಾದಿಸೋಣವೆಂದು ತಂದೆಯನ್ನು ಹುಡುಕಿಕೊಂಡು ಹೋದನು.

ಸತೀಶನಾದರೋ ಬಹಳ ಉದಾರಿಯು. ದಯಾಳು ಗುಣವುಳ್ಳವನು. ವಿದ್ಯೆಯ ಮಹಿಮೆಯಿಂದ ನ್ಯಾಯವಾದ ಮಾರ್ಗವನ್ನು ಹಿಡಿದು ನಡೆಯುವನೇ ಹೊರತು ಮಿಕ್ಕ ವಿಷಯಗಳಲ್ಲೆಲ್ಲಾ ಪ್ರಾಚೀನ ಸಂಪ್ರದಾಯಾನುಸರಣೆಯಲ್ಲಿ ಆಸಕ್ತಿಯುಳ್ಳವನೇ. ಮದುವೆಗೆ ಬಹಳ ಖರ್ಚು ಮಾಡಬೇಕೆಂತಲೂ ಅದಕ್ಕಿಲ್ಲದ ಹಣವು ಇನ್ನೇತಕ್ಕೆ ಇರಬೇಕೆಂತಲೂ, ಬ್ರಾಹ್ಮಣರಿಗೆ ಭೋಜನಮಾಡಿಸಿ ಭೂರಿದಕ್ಷಿಣೆ ಕೊಡಬೇಕೆಂತಲೂ, ಇಷ್ಟವುಳ್ಳ ಜಂಭಾಚಾರಿಯ ಪಂಗಡಕ್ಕೆ ಸೇರಿದವನು. "ಸಾಲಮಾಡಿಯಾದರೂ ಮದು

ಮಾಡು " ಎನ್ನುವ ಸೂತ್ರವನ್ನು ಚೆನ್ನಾಗಿ ಮನಸ್ಸಿನಲ್ಲಿಟ್ಟುಕೊಂಡಿರುವಂಥಾ ನತೀಶನು ತನ್ನ ಏಕ ಪುತ್ರಿಯಾದ ಇಂದಿರೆಗೆ ಮದುವೆ ಮಾಡಬೇಕೆಂದರೆ ತಲೇ ಕಾಲು ತಿಳಿಯುವುದೇ ? ಆದುದರಿಂದ ಹುಚ್ಚು ಹುಚ್ಚಾಗಿ ಖರ್ಚು ಮಾಡಲಾರಂಭಿಸಿದನು.

ಅವನ ಪುತ್ರನಾದ ಶಚೀಂದ್ರನು ಹಿಂದೆ ಹೇಳಿದಂತೆ ಸಂಸ್ಕರಣ ಸಂಘದವರೊಂದಿಗೆ ಸೇರಿದವನಾದ್ದರಿಂದ ವಿವಾಹದಲ್ಲಿ ದುಂದು ಖರ್ಚುಮಾಡುವುದು ಬಹಳ ತಪ್ಪೆಂದು ತಿಳಿದಿದ್ದನು. ಅವನು ನತೀಶನೊಂದಿಗೆ ಎಷ್ಟು ವಾದಿಸಿದರೂ ಪ್ರಯೋಜನವಿಲ್ಲದಂತಾಯಿತು. ತಂದೆ ಮಕ್ಕಳಿಗೆ ಈ ರೀತಿಯಾಗಿ ಸಂಭಾಷಣೆಯು ಜರುಗಿತು.

ಶಚೀಂದ್ರ :—ಅಪ್ಪಾ ! ನಾನು ಹೇಳುವುದನ್ನು ಗಮನವಿಟ್ಟು ಕೇಳು. ಸಿಕ್ಕಿದವರಿಗೆಲ್ಲಾ ಭೋಜನ ಮಾಡಿಸದೆ ನಮ್ಮ ಬಂಧುವರ್ಗದವರಿಗೂ ಬೀಗರಿಗೂ ಅನ್ನವಿಟ್ಟರೆ ಅದೇ ಸಾಕು. ಇನ್ನೂ ಬೇಕಾದರೆ ನಮ್ಮ ಸ್ನೇಹಿತರನ್ನೂ ಊಟಕ್ಕೆ ಹೇಳೋಣ.

ನತೀಶ :—ಅಯ್ಯೋ ! ಹುಚ್ಚನೇ ! ನಮ್ಮ ಮನೆಯಲ್ಲಿ ವಿವಾಹವೆಂದರೆ ಈ ಊರಲ್ಲೆಲ್ಲಾ ನಾಲ್ಕೈದುದಿನಗಳು ಅಡಿಗೆ ಮಾಡುತ್ತಿರಲಿಲ್ಲವೆಂದು ನಮ್ಮ ಪೂರ್ವಿಕರ ಕಾಲದಿಂದಲೂ ವದಂತಿ. ಅದನ್ನು ನನ್ನ ಕಾಲದಲ್ಲಿ ನಿಲ್ಲಿಸುವುದು ಅಸಾಧ್ಯ. ಇನ್ನೂ ಹಾದಬ್ರಾಹ್ಮಣರ ಹೊಟ್ಟೆಯಲ್ಲಿ ಒಂದು ಮುಷ್ಟಿ ಅನ್ನ ಬಿದ್ದರೆ ಅದರಿಂದ ಎಷ್ಟೋ ಪುಣ್ಯ ಲಭಿಸುವುದು.

ಶಚೀಂದ್ರ :—ಅಪ್ಪಾ, ಇದೇನವ್ಯಾಯ ! ನೀನು ಕೂಡ ಹೀಗೆ ಹೇಳುತ್ತಿರುವೆ ? ನಮ್ಮ ಹಿರಿಯರು ಈ ರೀತಿ ನಡೆದು ಅನೇಕ ಕಾಯಿದೆಗಳನ್ನು ಏರ್ಪಡಿಸಿದ್ದರಿಂದಲ್ಲವೇ ನಾವು ಈಗ ಎಷ್ಟು ಸಂಪಾದಿಸಿದರೂ ಸಾಲದೇ ಇಷ್ಟು ಹೀನಸ್ಥಿತಿಯಲ್ಲಿರುವುದು ; ಅದನ್ನು ಇನ್ನೂ ಅನುಸರಿಸಬೇಕೇ ! ಇನ್ನೂ ಈ ಕಾಲದಲ್ಲಿ ವೇದಬ್ರಾಹ್ಮಣರೆನ್ನುವಿಯಲ್ಲಾ ! ಅಂಥಾ ಉತ್ತಮ ಬ್ರಾಹ್ಮಣರು ಈ ಕಾಲದಲ್ಲಿ ಎಲ್ಲಿರುವರು ? ಕುರುಡುಪಾಠವಾಗಿ ವೇದವನ್ನು ಅರ್ಥ-ಅನರ್ಥವಾಗಿ

ಅಧ್ಯಯನಮಾಡಿ ವಿತ್ಪತ್ತಿಯಿಲ್ಲದೆ ಪ್ರತಿಯೊಬ್ಬರೂ ಆಚಾರ್ಯ ಪೀಠವನ್ನಲಂಕರಿಸಿ ವಿವಾಹಕ್ಕೆ ಲಗ್ನವನ್ನೂ ಕೂಡ ನಿರ್ಧರಿಸಲಸಮರ್ಥರಾಗಿರುವರು. ಯಾವ ಕರ್ಮವನ್ನು ಮಾಡಿದರೂ ಮಂತ್ರಲೋಪವಿಲ್ಲದೆ ಮಾಡುವುದೇ ಇಲ್ಲ. ವಧೂವರರ ಜಾತಕವನ್ನು ನೋಡಿ " ಈ ಜಾತಕಗಳೆರಡೂ ಬಹಳ ಚೆನ್ನಾಗಿ ಒಪ್ಪಿರುವವು. ಅಷ್ಟೈಶ್ವರ್ಯವಂತರಾಗಿ ಲಕ್ಷ್ಮೀನಾರಾಯಣನಂತೆ ಬಾಳುವರು. " ಎಂದು ಹೇಳುವರು. ಈ ವರನು ವಿವಾಹವಾದ ಮೂರನೇ ತಿಂಗಳಲ್ಲಿಯೇ ಯಮಾಲಯವನ್ನೈದುವನು. ಎಷ್ಟೋ ವಿಷಯಗಳನ್ನು ಫಲಹಾರ ಮಾಡಿಬಿಡುವರು. ಈ ಚಂಡಾಲತ್ವವು ಯಾರನ್ನು ಸೇರುವುದು ? ಎಷ್ಟು ಕೊಟ್ಟರೂ ತೃಪ್ತಿಯಿಲ್ಲ ; ಷಡ್ರಸಪೂರಿತವಾದ ಅನ್ನವಿಟ್ಟರೆ ಕಂಠಪೂರ್ತಿಯಾಗಿ ಭೋಜನಮಾಡಿ ಕೃತಘ್ನರಾಗಿ ದೂಷಿಸುವುದೇ ಇವರ ಸ್ವಭಾವವಾಗಿರುವುದು. ಕರ್ತನಾಗಿರುವನೇ ಪ್ರತ್ಯಕ್ಷವಾಗಿ ವಿಚಾರಿಸಿದರ, " ಅಹಾಹಾ! ದಿವ್ಯಪಕ್ವವು ನಳಪಾಕವು, ಮಹಾಭೋಜನವು, ಉದರದಲ್ಲಿ ಸ್ಥಳವಿಲ್ಲ, ಕ್ಷೀರಾನ್ನ ಬಂದೇಸಾ ಕಲ್ಲಿ. ಎಲ್ಲಾ ಶ್ರದ್ಧಾವಿಶೇಷ " ಎಂದು ತಪ್ಪು ಸ್ತೋತ್ರ ಮಾಡುವರು. ಇಂಥಾಪಾಷಂಡಿಗಳಿಗೆ ಅನ್ನವಿಡುವಷ್ಟು ಮಹಾಪಾತಕವು ಮತ್ತಾವುದೂ ಇಲ್ಲ. ಹಾಗೆ ಬೇಕಾದರ ಅನ್ನವಿಡಬೇಕೆಂಬುದು ನಿನ್ನ ಇಷ್ಟವಾದರೆ ಒಳ್ಳೇಯೋಗ್ಯರಾದ ಬ್ರಾಹ್ಮಣರನ್ನು ಕರೆಸಿ ಅನ್ನವಿಡೋಣ. ಕುರುಡರು, ಕುಂಟರು, ರೋಗಿಷ್ಟರು, ವೃದ್ಧರು, ಬಾಲರು ಇವರುಗಳಿಗೆಲ್ಲಾ ಅನ್ನವಿಡೋಣ.

ಸತೀಶ —ಶಚೀಂದ್ರ, ಈ ವಿಷಯದಲ್ಲಿ ನಿನಗಿನ್ನೂ ಅನುಭವ ಸಾಲದು. ಬಾಯಿಗೆ ಬಂದಂತೆ ಮಾತನಾಡುತ್ತಿರುವೆ. ನನ್ನ ಮಗಳ ವಿವಾಹಕ್ಕೆ ಖರ್ಚುಮಾಡಲು ನನಗೆ ಸರ್ವ ಸ್ವಾತಂತ್ರ್ಯವುಂಟು. ನೀನು ಈ ವಿಷಯದಲ್ಲಿ ಇನ್ನು ಪ್ರವೇಶಿಸಬೇಡ " ಎಂದು ಸಿಟ್ಟಿನಿಂದ ಹೇಳಿದನು .

ತಂದೆಯ ಕಠಿಣ ವಾಕ್ಯವನ್ನು ಕೇಳುತ್ತಲೇ ಶಚೀಂದ್ರನು ತಲೆ ಬಗ್ಗಿಸಿಕೊಂಡು ಹೊರಟುಹೋದನು. ಸತೀಶನಾದರೋ ಬಹಳ

ಸಂಭ್ರಮದಿಂದ ವಿವಾಹವನ್ನು ನೆರವೇರಿಸುವುದಾಗಿ ನಿಶ್ಚೈಸಿ ಎರಡು ಸಾವಿರ ರೂಪಾಯಿಗಳ ಸಾಲಕ್ಕೂ ಏರ್ಪಾಡು ಮಾಡಿಬಿಟ್ಟನು.

ವಿವಾಹಕ್ಕೆ ಮಾಡುವ ದುಂದು ಖರ್ಚುಗಳನ್ನು ನಿಲ್ಲಿಸಿ ಆ ಹಣವನ್ನು ವಧೂವರರ ಉಪಯೋಗಕ್ಕಾಗಿ ವೆಚ್ಚಮಾಡಿದರ ಸಾರ್ಥಕವುಂಟು. ಅದನ್ನು ಬಿಟ್ಟು ಊಟ ಉಪಚಾರಗಳಿಗೂ, ಹೋಶ್ಯಿಯರ ಮೇಳ, ಸುರವಣಿಗೆ, ಕನ್ಯಾಶುಲ್ಕ, ಇವುಗಳಿಗೂ ವ್ಯರ್ಥವಾಗಿ ಖರ್ಚು ಮಾಡುವುದರಿಂದ ಎಳ್ಳಷ್ಟು ಕೂಡಾ ಪ್ರಯೋಜನವಿಲ್ಲ. ಒಬ್ಬ ಮಗಳಾದರೇನು! ಸಾಲ ಸೋಲಮಾಡಿ, ಮನೆ ಮಠಗಳನ್ನು ಮಾರಿ ಮದುವೆ ಮಾಡಬೇಕೆಂದು ಯಾವ ಶಾಸ್ತ್ರದಲ್ಲಿ ಹೇಳಿರುವುದು? ಕಾಲಕ್ಕೆ ತಕ್ಕಂತೆ ನಾವು ನಡಯಬೇಕೇ ಹೊರತು ಕಾಲವನ್ನು ನಮಗೆ ತಕ್ಕಂತೆ ನಡಯಲು ತಿರುಗಿಸಿ ಕೊಳ್ಳುವುದು ಮಹಾ ಕಷ್ಟ. ನಟೇಶನು ಪೂರ್ವಾಚಾರಗಳಲ್ಲಿ ಆಸಕ್ತಿಯುಳ್ಳವನಾದ್ದರಿಂದ ರಾಜೇಂದ್ರನ ಮಾತುಗಳು ಅವನಿಗೆ ಸ್ವಲ್ಪವೂ ರುಚಿಸಲಿಲ್ಲ. ಇದರಿಂದ ಮುಂದೆ ಅನೇಕ ಕಷ್ಟಗಳನ್ನು ಅನುಭವಿಸಬೇಕಾಗಿ ಬಂದಿತು.

೨ ನೆಯ ಅಧ್ಯಾಯ ಸಂಪೂರ್ಣಂ.

---

# ಮೂರನೆಯ ಅಧ್ಯಾಯ.

---

## ವಿವಾಹ ಸಂಭ್ರಮವು.

ನಟೇಶನ ಗೃಹದಲ್ಲೀರೀತಿಯಿರಲು ಕಲ್ಲೀಕೋಟೆಯಲ್ಲಿ ಸುಂದರೇಶನ ಸ್ಥಿತಿಯನ್ನು ಸ್ವಲ್ಪ ವಿಚಾರಿಸೋಣ. ಇಂದಿರೆಯು ತನ್ನನ್ನಗಲಿದ್ದುದು ಮೊದಲು ಸುಂದರೇಶನು ಸದಾ ಅವಳ ಜ್ಞಾಪಕದಲ್ಲಿಯೇ ಕಾಲ ಕಳೆಯುತ್ತಿದ್ದನು. ಒಂದೊಂದುವೇಳೆ ಇಂದಿರೆಯಲ್ಲಿ ತನಗಷ್ಟೊಂದು ಪ್ರೀತಿಯುಂಟಾಗಲು ಕಾರಣವೇನೆಂದು ಯೋಚಿಸುವನು! ಅವಳ ಗುಣವನ್ನೂ, ಸೌಂದರ್ಯವನ್ನೂ, ಬುದ್ಧಿವಿಕಾಸವನ್ನೂ, ನಡೆ ನಡೆದು

ಮರುಗುವನು. ತನಗವಳು ಪತ್ನಿಯಾಗಿ ಸೃಷ್ಟಿಸಲ್ಪಟ್ಟಿರುವಳೆಂಬುದನ್ನರಿತು ತನಗೆ ಸಹಾಯ ಮಾಡಿರುವ ಪರಮಾತ್ಮನ ಲೀಲೆಯನ್ನು ವರ್ಣಿಸುವನು. ಅವಳ ಮೇಲೆ ಕವಿತ್ವವನ್ನು ಕಟ್ಟಿ ಹಾಡುವನು. ನಾನು ವಿಶೇಷವಿಂದ ಇಂದಿರೆಯೆಂಬ ಹೆಸರುಳ್ಳ ಪರಿಚಾರಕಳನ್ನು ಕೂಡ ಇತರರು ದೂಷಿಸಲು ಸಹಿಸನು. ಈ ರೀತಿಯಾಗಿ ಇವನು ಮನೋರಾಜ್ಯ ಮಾಡುತ್ತಿದ್ದ ದಿನಗಳಲ್ಲೊಂದು ದಿನ ತನ್ನ ಚಿಕ್ಕಪ್ಪನ ಹೆಸರಿಗೊಂದು ಲಗ್ನಪತ್ರಿಕೆಯು ಬಂದದ್ದನ್ನು ಕಂಡನು. ಅದನ್ನು ಕಂಡ ಕೂಡಲೇ ಅದರ ಮೇಲಿರುವ ಅಂಚೆಯಮುದ್ರೆಯಿಂದ ಅದು ನಾಸಿಕದಿಂದ ಬಂದಿರುವದರಿಂದ ಒಂದು ವೇಳೆ ಅದು ಶಚೀಂದ್ರನ ನಿಷೇಕ ಪ್ರಸ್ತದ ಲಗ್ನಪತ್ರಿಕೆಯಾಗಿರಬಹುದೆಂದೂ, ಅದಕ್ಕೋಸ್ಕರವಾದರೂ ತಾನು ಅಲ್ಲಿಗೆ ಹೋದರೆ ತನ್ನ ಪ್ರಾಣಪ್ರಿಯಳಾದ ಇಂದಿರೆಯನ್ನು ನೋಡಬಹುದೆಂದೂ ಬಹಳ ಆಹ್ಲಾದ ಹೊಂದಿದವನಾದನು. ಆಹಾ! ಅವನು ಆ ಪತ್ರದಲ್ಲಿದ್ದುದನ್ನು ನೋಡುತ್ತಲೇ ಅವನ ಆಶೆಯಲ್ಲಾ ನಿರಾಶೆಯಾಯಿತು. ಏನು ಮಾಡಿಯಾನು? ನಿದ್ರೆಯಲ್ಲಿಯೂ ಎಚ್ಚರದಲ್ಲಿಯೂ ಇಂದಿರೆಯೇ ತನ್ನ ಪ್ರಾಣಪ್ರಿಯಳೆಂದು ಭಾವಿಸಿದ್ದ ಆ ಇಂದಿರೆಯು ಈಗ ಮೂಢ ಶಿಖಾಮಣಿಯಾದ ನಾರಾಯಣನನ್ನು ಕೈ ಹಿಡಿಯುವಳು. ತಾನೊಂದು ನೆನಸಿದರೆ ದೈವವೊಂದು ನೆನಸಿತು. ದೈವಗತಿಯನ್ನು ಮೀರುವವರ್ಯಾರು? ಆ ಸಮಯದಲ್ಲಿ ಸುಂದರೇಶನ ಸ್ಥಿತಿಯನ್ನು ಬಣ್ಣಿಸಲು ಸಾವಿರ ನಾಲಿಗೆಯುಳ್ಳ ಆದಿಶೇಷನಿಗೂ ಅಸಾಧ್ಯ. ಇಂದಿರೆಯು ಹುಟ್ಟಿದ್ದು ಮೊದಲು ಅವಳೇ ನನ್ನ ಸತಿಯಾಗುವಳೆಂದು ದೃಢವಾಗಿ ನಂಬಿದ್ದನು. ಆಡುವಾಗಲೂ, ನಿದ್ರಿಸುವಾಗಲೂ, ಊಟಮಾಡುವಾಗಲೂ ಅವಳ ಜತೆಯಲ್ಲಿಯೇ ಇದ್ದನು. ತಾನೇ ಅವಳಿಗೆ ವಿದ್ಯಾಬೋಧಕನಾಗಿ ನಿಂತನು. ಅವಳ ಮೇಲಿನ ಪ್ರೀತಿಯು ದಿನದಿನಕ್ಕೆ ಹೆಚ್ಚುತ್ತಿತ್ತೇ ಹೊರತು ಕಮ್ಮಿಯಾಗುತ್ತಿರಲಿಲ್ಲ. ಯಾರಿಗೂ ಕಾಣದಂತೆ ತನ್ನ ಜಾತಕವನ್ನೂ ಇಂದಿರೆಯ ಜಾತಕವನ್ನೂ ಜ್ಯೋತಿಷ್ಯರಿಗೆ ತೋರಿಸಿ ಇಬ್ಬರಿಗೂ ವಿವಾಹವಾಗುವುದೇ ಎಂದು ಕೇಳುವನು. ಅವರು ವಿವಾಹವಾಗಿ ದಂಪತಿಗಳು ಬಹಳ ಸೌಖ್ಯವಾಗಿರುವರೆಂದು ಹೇಳುವರು. ಹಾಗಿದ್ದರೂ ಹೀಗಾಗಲು ಕಾರಣವೇನು?

ಒಂದು ವೇಳೆ ಜ್ಯೋತಿಷ್ಯವೇ ಸುಳ್ಳಾಗಿರಬಹುದೋ ಏನೋ ಎಂದಂದುಕೊಳ್ಳುವನು.

ಈ ರೀತಿಯಾಗಿ ಬಹಳ ಹೊತ್ತು ಚಿಂತಿಸಿ ತನ್ನನ್ನು ತಾನೇ ಸಮಾಧಾನಮಾಡಿಕೊಂಡು ಕಾಗದವನ್ನು ಕೈಯಲ್ಲಿ ತೆಗೆದು ಕೊಂಡು ಚಿಕ್ಕಪ್ಪನಿಗೆ ಕೊಟ್ಟನು. ಅವನೂ ಓದಿನೋಡಿ ಇಂದಿರೆಯು ಸುಂದ ರೇಶನಿಗೆ ದೊರಕಲಿಲ್ಲವೆಂದು ಬಹಳ ಚಿಂತಾಕ್ರಾಂತನಾದನು. ಸುಂ ದರೇಶನು ಬಾಲ್ಯಾರಭ್ಯ ಇಂದಿರೆಯುನ್ನು ಪ್ರೀತಿಸುತ್ತಿದ್ದ ನಾದ್ದರಿಂದ ಇದರಿಂದ ಒಂದುವೇಳೆ ಅವನ ಮನ ಮುರಿದರೂ ಮುರಿಯಬಹು ದೆಂದು ನೆನಸಿದನು. ಮೊದಲಿನಿಂದ ತನ್ನ ಪುತ್ರಿಯನ್ನು ಸುಂದರೇ ಶನಿಗೆ ಕೊಡುತ್ತೇನೆಂದು ವಾಗ್ದಾನಮಾಡಿದ್ದ ಸತೀಶನು ಈಗ ಅವ ನನ್ನು ಬಿಟ್ಟು ಬೇರೊಬ್ಬನಿಗೆ ಕೊಡುವದರಿಂದ ತನ್ನನ್ನು ಅವಮಾನ ಮಾಡಿದ್ದಾಗೆ ತಿಳಿದುಕೊಂಡನು. ಆದ್ದರಿಂದ ಅವರ ಕಣ್ಣಮುಂದೆ ಯೇ ತಕ್ಕ ಹೆಣ್ಣನ್ನು ಹುಡುಕಿ ಅದೇ ವರ್ಷವೇ ಮದುವೆ ಮಾಡ ಬೇ ಕೆಂದು ತೀರ್ಮಾನ ಮಾಡಿಕೊಂಡನು. ಇಷ್ಟೊಂದು ಯೋಚನೆ ಯನ್ನು ಮಾಡಿಕೊಂಡು ತನ್ನ ಮನಸ್ಸಿನ ಆಯಾಸವನ್ನು ಹೊರಗೆ ತೋರ್ಪಡಿಸದೆ ಸಂಸಾರಸಹಿತನಾಗಿ ಬಹಳ ಉತ್ಸಾಹದಿಂದ ಸುಂದ ರೇಶನನ್ನೂ ಕರೆದುಕೊಂಡು ಮದುವೆಗೆ ಪ್ರಯಾಣ ಮಾಡಿದನು.

ಸತೀಶನ ಮನೆಗೆ ನಾನಾ ಕಡೆಯಿಂದ ಬಂಧುಗಳೂ, ಮಿತ್ರರೂ ಬರಲಾರಂಭಿಸಿದರು. ಮದುವೆಯ ಗಂಡನ್ನೂ, ಬೀಗರನ್ನೂ ಮೇಳ ವಾದ್ಯಗಳ ಸಹಿತ ಅವರಿಗೋಸ್ಕರ ಏರ್ಪಡಿಸಿದ್ದ ಬಿಡದಿಯಲ್ಲಿ ಇಳಿಸಿ ದರು. ಇದನ್ನೆಲ್ಲಾ ನೋಡಿದ ಸುಂದರೇಶನು ಇಷ್ಟೊಂದು ಮರ್ಯಾ ದೆಯೂ, ತಾನು ಇಂದಿರೆಯನ್ನು ಕೈಹಿಡಿದಿದ್ದರೆ ತನಗೆ ಉಂಟಾಗುತ್ತಿ ತ್ತಲ್ಲವೇ ಎಂದು ಮನಮರುಗಿದನು. ತಾನು ಈ ಸಮಯದಲ್ಲಿ ವ್ಯಸನ ವನ್ನು ತೋರ್ಪಡಿಸುವುದು ಉಚಿತವಲ್ಲವೆಂದು ತಿಳಿದು ಬಹಳ ಕುತೂ ಹಲದಿಂದ ಮದುವೆಯಲ್ಲಿ ಓಡಿಯಾಡಲಾರಂಭಿಸಿದನು. ಇವನು ಮ ನೆಗೆ ಬಂದದ್ದನ್ನು ಕಂಡ ಸ್ವರ್ಣಳು ನಿಟ್ಟುಸಿರುಬಿಡುತ್ತಾ ಬಂದವನ ನ್ನು ಬಾ ಎಂದು ಕೂಡಕರೆಯದೆ ಮುಖವನ್ನು ತಿರಿಗಿಸಿಕೊಂಡು

ಹೋದಳು. ಅವಳ ಪರಿತಾಪ ಸ್ಥಿತಿಯನ್ನು ಸುಂದರೇಶನೂ ತಿಳಿದು ಕೊಂಡನು. ಅಲ್ಲಿಗೆ ಹೋದದ್ದು ಮೊದಲು ಒಂದು ಸಲವಾದರೂ ಇಂದಿರೆಯ ಮುಖದರ್ಶನವನ್ನು ಮಾಡಬೇಕೆಂದು ಕುತೂಹಲವುಳ್ಳವ ನಾಗಿದ್ದನು. ಅಕಸ್ಮಾತ್ತಾಗಿ ಒಂದುಸಲ ಆ ಮಾರ್ಗವಾಗಿ ಹೋಗು ತ್ತಿದ್ದ ಇಂದಿರೆಯು ಸುಂದರೇಶನನ್ನು ಕಾಣುತ್ತಲೂ ತಲೆಬಗ್ಗಿಸಿಕೊಂ ಡು ಓಡಿಹೋದಳು. ಅದರ ಕಾರಣವೇನೋ ಸುಂದರೇಶನಿಗೆ ಚೆನ್ನಾಗಿ ಗೊತ್ತಾಗಲಿಲ್ಲ. ಆದರೂ ಅವಳಿಗೆ ತನ್ನಲ್ಲಿ ಅಭಿಮಾನವಿರುವುದೆಂತ ಲೂ, ಕಳೆದ ಒಂದು ವರ್ಷದಿಂದ ತನ್ನವಳು ಅಗಲಿರುವುದರಿಂದ ಪ್ರೀತಿ ವಿಶ್ವಾಸಗಳು ಮತ್ತಷ್ಟು ಹೆಚ್ಚಿರುವುದೆಂತಲೂ ತಿಳಿದನು. ತಾನು ಅವಳನ್ನು ಪ್ರೀತಿಸುವಂತೆಯೇ ಅವಳೂ ತನ್ನನ್ನು ಪ್ರೀತಿಸುತ್ತಿ ರುವಳೆಂದೂ ತಿಳಿದಿದ್ದನು. ತನ್ನ ಪ್ರಾಣಪದಕವಾಗಿ ಭಾವಿಸಿದ್ದವನನ್ನು ಬಿಟ್ಟು ನಾರಾಯಣನನ್ನು ವರಿಸಬೇಕೆನ್ನುವ ಲಜ್ಜೆಯಿಂದ ಮುಖ ವನ್ನು ತೋರಿಸದೇ ಹೋದಳು. ಬೇರೊಬ್ಬನನ್ನು ವರಿಸಿದರೂ ಕೂಡ ಅವಳ ಮನಸ್ಸೆಲ್ಲಾ ಸುಂದರೇಶನಲ್ಲಿಯೇ ಲೀನವಾಗಿತ್ತು. ಇವಳ ಮನೋಭಾವವನ್ನು ಸುಂದರೇಶನು ಬಹಳ ಮಟ್ಟಿಗೆ ತಿಳಿದು ಕೊಂಡನು.

ಸುಂದರೇಶನು ಈ ರೀತಿ ಸ್ವಲ್ಪ ಹೊತ್ತು ಚಿಂತೆಯಲ್ಲಿ ಮುಳು ಗಿದ್ದು ಕೊನೆಗೆ ತನ್ನನ್ನು ತಾನೇ ಸಮಾಧಾನ ಪಡಿಸಿಕೊಂಡನು. ಮೇಳ, ವಾದ್ಯ, ಬಾಣಬಿರುಸುಗಳ ಸಮೇತ ಸತೀಶನು ತನ್ನ ಬಂಧು ವರ್ಗದವರೊಂದಿಗೂ, ಮಿತ್ರರೊಂದಿಗೂ ಕೂಡಿದವನಾಗಿ, ವರನನ್ನು ಇದಿರುಗೊಂಡು ವರಪೂಜೆಯನ್ನು ಮಾಡಿ, ಬೀಗರನ್ನು ಅವರ ಬಿಡಾ ರದಲ್ಲಿ ಇಳಿಸಿ, ತನ್ನ ಜನಗಳ ಸಮೇತ ಸ್ವಗೃಹಕ್ಕೆ ತೆರಳಿದನು. ಮಾರ ನೆಯ ದಿನವಾದ ಧಾರೆಯ ದಿನ ಮಾಡಬೇಕಾದ ವಿಧಿಗಳನ್ನೆಲ್ಲಾ ಶಾ ಸ್ತ್ರೋಕ್ತವಾಗಿ ನೆರವೇರಿಸಿ ಅನೇಕ ಜನರ ಮಧ್ಯದಲ್ಲಿ ಸಕಲವಾದ್ಯ ಗಳೂ ಭೋರ್ಗರೆಯುತ್ತಿರುವ ಸಮಯದಲ್ಲಿ ಚೂಡಾಮಣಿಯು ಮೂಢಶಿಖಾಮಣಿಯಾದ ಕುರುಬನನ್ನು ವರಿಸಿದಂತೆ ಮೂರ್ಖಶಿಖಾ ಮಣಿಯಾದ ನಾರಾಯಣನನ್ನು ವರಿಸಿದಳು. ವಿವಾಹ ವಿಧಿಗಳೆಲ್ಲಾ

ಶಾಸ್ತ್ರೋಕ್ತವಾಗಿ ನೆರವೇರಿದ ತರುವಾಯ ಬ್ರಾಹ್ಮಣರಿಗೆ ತೃಪ್ತಿಕರವಾಗಿ ಭೋಜನ ಮಾಡಿಸಿ ಭೂರಿದಕ್ಷಿಣೆಗಳನ್ನು ಕೊಟ್ಟರು. ನಾಲ್ಕು ದಿನಗಳೂ ನಡೆಯಬೇಕಾದ ಉರಟಣೆ, ಔಪಾಸನ ಮೊದಲಾದುವುಗಳೆಲ್ಲಾ ಯಾಥಾವಿಧಿಯಾಗಿ ನೆರವೇರಿದವು. ಸ್ವರ್ಣಾಳು ನಾಗರಿಕವಂತಳಾದ್ದರಿಂದ ಬೀಗರು ಹೇಳುವ ಹುಚ್ಚು ಹಾಡುಗಳು ಇವಳಿಗೆ ಸ್ವಲ್ಪವೂ ರುಚಿಸಲಿಲ್ಲ. ಬೀಗರ ಮನೆಯಲ್ಲಿ ಕಾಳೀಮಣಿಯ ಆರ್ಭಟವನ್ನು ಅಷ್ಟಿಷ್ಟೆಂದು ಹೇಳತೀರದು. ಅದು ಮಾಡಲಿಲ್ಲ, ಇದು ಮಾಡಲಿಲ್ಲ, ನಾರಾಯಣನಿಗೆ ತೆಗೆದ ಪಂಚೆಗೆ ಅಂಚು ಸಣ್ಣ, ಭೋಜನ ಮಾಡಿಸಿದ್ದು ಸರಿಯಾಗಿಲ್ಲ, ಎಂದು ಮಾಡುತ್ತಿದ್ದ ಆರ್ಭಟಕ್ಕೆ ತುದಿ ಮೊದಲಿಲ್ಲ. ಇದನ್ನೆಲ್ಲಾ ನೋಡುತ್ತಿದ್ದ ಸ್ವರ್ಣಾಳೂ, ಸತೀಶನೂ ಸುಂದರೇಶನಿಗೆ ಮಾತ್ರ ಇಂದಿರೆಯನ್ನು ವಿವಾಹ ಮಾಡಿದ್ದರೆ ಇಷ್ಟೊಂದು ಗಲಭೆಗೂ ಅವಕಾಶವಿರುತ್ತಿಲ್ಲವೆಂದು ತಿಳಿದು ಮನಮರುಗಿದರು. ಇಂದಿರೆಗೆ ನಾರಾಯಣನ ಮುಖವನ್ನು ನೋಡಲುಕೂಡ ಇಷ್ಟವಿರಲಿಲ್ಲ. ಸುಂದರೇಶನಾದರೋ ಇಂಥಾ ರತ್ನ ಪುತ್ಥಳಿಯು ತನಗೆ ದೊರಕದೆ ಹೋದದ್ದರಿಂದ ಮನಮರುಗಿದರೂ ಅವಳು ಬೇರೊಬ್ಬನ ಪತ್ನಿಯಾದ್ದರಿಂದ ಇನ್ನು ಅವಳನ್ನು ಮನಸ್ಸಿನಲ್ಲಿ ನೆನೆಸುವುದೇ ಮಹಾ ಪಾತಕವೆಂದೂ, ಅವಳನ್ನು ತನ್ನ ಪ್ರಿಯ ಸಹೋದರಿಯಂತೆ ಭಾವಿಸಬೇಕೆಂದೂನಿಶ್ಚಯಿಸಿಕೊಂಡು ಮನಸ್ಸನ್ನುಬಿಗಿಹಿಡಿದುಕೊಂಡು ಮದುವೆಯಸಂಭ್ರಮದಲ್ಲಿ ಸೇರಿದ್ದನು. ಇಂದಿರೆಗೆ ತನ್ನಮುಖವನ್ನು ಸುಂದರೇಶನಿಗೆ ತೋರಿಸುವುದಕ್ಕೆ ಕೂಡ ಲಜ್ಜೆಯಾಗಿತ್ತು. ಇದನ್ನರಿತ ಸ್ವರ್ಣಾಳು "ಇಂದಿರೇ ! ಅವನನ್ನು ಕಂಡು ಏತಕ್ಕೆ ಲಜ್ಜೆಪಡುತ್ತಿರುವೆ ? ನಾವು ಕೇಳಿಕೊಂಡು ಬಂದದ್ದು ಇಷ್ಟೆ. ಇನ್ನು ಮೇಲೆ ಸಂಕೋಚವಿಲ್ಲದೆ ಸಲೀಸಾಗಿ ಅವನ ಜತೆಯಲ್ಲಿ ಮಾತನಾಡು" ಎಂದಳು. ಈ ರೀತಿಯಾಗಿ ನಾಲ್ಕು ದಿನಗಳ ವಿವಾಹ ವಿಧಿಯೂ ಸಾಂಗವಾಗಿ ನೆರವೇರಿದವು. ಐದನೆಯ ದಿನ ಬೆಳಿಗ್ಗೆ ನಾಗವಲ್ಲಿಯ ರಾತ್ರಿ ಮೆರವಣಿಗೆಯೂ ಬಹಳ ವಿಜೃಂಭಣೆಯಾಗಿ ನಡೆಯಿತು. ಇಂಥಾ ಮೆರವಣಿಗೆಯ ಸಂಭ್ರಮವನ್ನು ಆಲೂರಿನ ಮಹಾಜನಗಳು ಎಂದೂ ಕಂಡಿರಲಿಲ್ಲ. ಮೆರವಣಿಗೆಯ ದಿನ ಬಾಣಗಳಿಂದ ಬಿದ್ದ ಕಿಡಿಯಿಂದ

ಬೀಗರ ಮನೆಯ ಚಪ್ಪರವು ಭಸ್ಮವಾಯಿತು. ಈ ಅಶುಭ ಸೂಚನೆಯನ್ನು ಕಂಡು ಮುಂದೇನಾಪತ್ತು ವಧೂವರರಿಗೆ ಒದಗುವುದೋ ಎಂದು ಸರ್ವರೂ ವ್ಯಥೆಗೊಂಡರು. ಮುಂದ ಇಂದಿರೆಗೆ ಉಂಟಾಗಬೇಕಾದ ಅಶುಭವು ಈಗಲೇ ಸೂಚಿತವಾದಂತಾಯಿತು. ತರುವಾಯ ಬೀಗರ ಔತನವೂ ನಡೆದು ಅವರಿಗೆ ನಡೆಸಬೇಕಾದ ಮರ್ಯಾದೆಗಳನ್ನೆಲ್ಲಾ ನಡೆಸಿ, ನಟೇಶನು ತನ್ನ ಅಳಿಯನಾದ ನಾರಾಯಣನನ್ನೂ, ಬೀಗರನ್ನೂ ಅವರ ಊರಿಗೆ ಪರಮ ಹರ್ಷದಿಂದ ಕಳುಹಿಕೊಟ್ಟನು.

ಮೂರನೆಯ ಅಧ್ಯಾಯ ಸಂಪೂರ್ಣಂ.

---

# ನಾಲ್ಕನೆಯ ಅಧ್ಯಾಯ.

---

## ಸುಂದರೇಶನ ವಿವಾಹ ಮಹೋತ್ಸವವು.

ಮೇಲೆ ಹೇಳಿದಂತೆ ಇಂದಿರೆಯ ವಿವಾಹವು ಸಾಂಗವಾಗಿ ನೆರವೇರಿದನಂತರ ಎಲ್ಲರೂ ತಮ್ಮ ತಮ್ಮ ಸ್ವಸ್ಥಾನಕ್ಕೆ ತೆರಳಿದರೂ, ಸುಂದರೇಶನು ಮಾತ್ರ ತನ್ನ ವಿರಾಮ ಕಾಲವನ್ನು ನಟೇಶನ ಗೃಹದಲ್ಲಿಯೇ ಕಳೆಯಬೇಕೆಂದು ನಿಶ್ಚೈಸಿದನು. ರಜಾ ದಿನಗಳನ್ನು ಇಲ್ಲ ಕಳೆದರ ಇಂದಿರೆಯನ್ನು ಹೊಂದದ್ದರಿಂದ ತನಗುಂಟಾದ ಮನಸ್ಸಿನ ವ್ಯಾಕುಲವು ಶಮನವಾಗುವುದೆಂದು ತಿಳಿದನು. ಈಗ ಇಂದಿರೆಯು ತನಗೆ ಪತ್ನಿಯಲ್ಲದ್ದರಿಂದ ತನಗೆ ಅವಳಲ್ಲಿರುವ ವಾಂಛೆಯಿಂದಲೂ, ಸ್ತ್ರೀವಿದ್ಯಾಭ್ಯಾಸವನ್ನು ಅವಳ ಮೂಲಕ ಪೂರ್ತಿಗೊಳಿಸಬೇಕೆಂಬ ಉದ್ದೇಶದಿಂದಲೂ ಯಾವ ಆತಂಕವೂ ಇಲ್ಲದೆ ತಾನು ಅವಳ ವಿವಾಹವಾಗುವುದಕ್ಕೆ ಮುಂಚೆ ಅವಳೊಂದಿಗೆ ಎಷ್ಟು ಸ್ವಾತಂತ್ರ್ಯದಿಂದಿದ್ದನೋ ಅಷ್ಟು ಸ್ವಾತಂತ್ರ್ಯದಿಂದ ಈಗಲೂ ಅವಳ ವಿದ್ಯಾಭ್ಯಾಸಕ್ಕೆ ಗಮನ ಕೊಡುತ್ತಿದ್ದನು. ತನ್ನ ವಿಷಯದಲ್ಲಿ ಇಷ್ಟು ಶ್ರದ್ಧೆ ವಹಿಸಿ ಪಾಡು ಪಡುತ್ತಿರುವ ಈ ಮಹನೀಯನು ತನಗೆ ಪತಿಯಾಗಿ ದೊರೆಯ

ಲಿಲ್ಲವಲ್ಲಾ ! ಎಂದು ಇಂದಿರೆಯು ಮನಮರುಗುವಳು. ಇಷ್ಟೊಂದು ಬುದ್ಧಿವಿಕಾಸತೆ ಹೊಂದಿರುವ ನಾರೀರತ್ನವನ್ನು ತಾನೂ ಸಹ ಧರ್ಮಿಣಿಯಾಗಿ ಹೊಂದುವ ಭಾಗ್ಯವು ತನಗೆ ಲಭಿಸಲಿಲ್ಲವಲ್ಲಾ ಎಂದು ಸುಂದರೇಶನು ವ್ಯಥೆಪೊಂದುವನು. ಇಬ್ಬರಿಗೂ ಬೇರೆ ಪತಿಪತ್ನಿಯರು ಏರ್ಪಟ್ಟಿದ್ದರೂ ಕೂಡ ತಾವು ಒಬ್ಬರನ್ನೊಬ್ಬರು ಮರೆಯಲಿಲ್ಲವೆಂಬ ಭಾವನೆಯು ಮಾತ್ರ ಈ ಇಬ್ಬರ ಮನಸ್ಸಿನಲ್ಲಿಯೂ ಸ್ವರ್ಣಾಕ್ಷರಗಳಂತೆ ಚೆನ್ನಾಗಿ ಮುದ್ರಿತವಾಗಿದ್ದುವು. ಆದರೂ ಇನ್ನೇನು ಮಾಡುವುದಕ್ಕೂ ಸಾಗದೆ ಅವನನ್ನೇ ತನ್ನ ವಿದ್ಯಾಗುರುವನ್ನಾಗಿ ಭಾವಿಸಿ ಅವನಿಂದ ವಿದ್ಯೆಯನ್ನೂ, ಕಲೆಗಳನ್ನೂ ಅತಿ ಶ್ರದ್ಧೆಯಿಂದ ಕಲಿಯಲಾರಂಭಿಸಿದಳು.

ಸತೀಶನ ಗೃಹದಲ್ಲಿ ಈ ರೀತಿಯಾಗಿರಲು ಇದೇ ವರ್ಷದಲ್ಲಿಯೇ ಸುಂದರೇಶನಿಗೂ ವಿವಾಹವನ್ನು ನಡೆಸಬೇಕೆಂದು ಅವನ ಚಿಕ್ಕಪ್ಪನು ಒಳ್ಳೆಯ ಕನ್ಯೆಯನ್ನು ನಿಶ್ಚಯಿಸಿ ಆ ಪುಷ್ಯಮಾಸದಲ್ಲಿಯೇ ವಿವಾಹ ಮಹೋತ್ಸವವನ್ನು ಬೆಳೆಸಬೇಕೆಂದೆಣಿಸಿ ಅದಕ್ಕೆ ಬೇಕಾದ ಸಲಕರಣೆಗಳನ್ನೆಲ್ಲಾ ಶೇಖರಗೊಳಿಸಲಾರಂಭಿಸಿದನು. ಮದುವೆಗೆ ಎಲ್ಲವೂ ಸಿದ್ಧವಾಗುತ್ತಲೂ ಹೆಣ್ಣಿನ ಮಾತಾಮಹಿಯು ಪರಲೋಕಪ್ರಾಪ್ತಿಹೊಂದಿದಳು. ಆದುದರಿಂದ ಸಧ್ಯಕ್ಕೆ ವಿವಾಹವನ್ನು ನಿಲ್ಲಿಸಿ ಇನ್ನೂ ಸ್ವಲ್ಪದಿನಗಳು ಕಳೆದನಂತರ ನೆರವೇರಿಸಬೇಕೆಂದು ನಿಶ್ಚಯಿಸಿದರು. ಇಂದಿರೆಯ ವಿವಾಹವಾದದ್ದು ಮೊದಲು ನಾರಾಯಣನು ಸತೀಶನ ಗೃಹಕ್ಕೆ ಬರಲಿಲ್ಲ. ಗಣೇಶನ ಹಬ್ಬಕ್ಕೆ ಬರಹೇಳಿ ಕಳುಹಿಸಿದ್ದಕ್ಕೆ ಕಾಶೀಮಣಿಯು ಬೇಡವೆಂದು ತಡೆದಳು. ದೀವಳಿಗೆ ಹಬ್ಬಕ್ಕೆ ಹೇಳಿಕಳುಹಿಸಿದಕ್ಕೆ ಮದುವೆಯಲ್ಲಿ ತೆಗೆದ ಉಡುಗೊರೆಗಳೇ ಸಾಕು ಇನ್ನು ಹಬ್ಬಕ್ಕೆ ಬೇರೆ ಅವರ ಮನೆಗೆ ಹೋಗಬೇಕೇ, ಎಂದುಬಿಟ್ಟಳು. ಎಷ್ಟೇ ತಮಗೆ ಇಷ್ಟವಿಲ್ಲದಿದ್ದರೂ ಕೂಡ ಮದುವೆಯಾದ ಮೇಲೆ ಅವನೆ ತಾನೇ ಅಳಿಯ. ಪುತ್ರಿಯ ಮೇಲಿನ ಪ್ರೇಮವು ಹೋಗುವುದೇ ? ಗಣೇಶನ ಹಬ್ಬಕ್ಕೆ ತಾನೇ ಬರಲಿಲ್ಲ. ದೀವಳಿಗೆ ಹಬ್ಬಕ್ಕಾದರೂ ಕಾಶೀಮಣಿಯನ್ನು ತೃಪ್ತಿಗೊಳಿಸಿ ನಾರಾಯಣನನ್ನು

ಕಲಿಸಬೇಕೆಂದು ಸ್ವರ್ಣಳು ಎಷ್ಟೋ ಪ್ರಯತ್ನಪಟ್ಟಳು. ಆ ಆಶೆಯೂ ಸಫಲವಾಗಲಿಲ್ಲ. ಹೀಗಿರಲೊಂದು ದಿನ ಸತೀಶನ ತಾಯಿಯು ಅಕಸ್ಮಾತ್ತಾಗಿ ಮೂರ್ಛೆಹೋಗಿ ಕೆಳಗೆ ಬಿದ್ದು ಮುಂದೆ ನಡೆಯತಕ್ಕ ವಿಪತ್ಪರಂಪರೆಗಳನ್ನು ನೋಡದೆ ದೇಹವಿಯೋಗ ಹೊಂದಿದಳು. ಇವಳ ಮರಣದಿಂದ ಆ ವರ್ಷವೆಲ್ಲಾ ಯಾವ ಶುಭ ಕಾರ್ಯಕ್ಕೂ ಅನುಕೂಲವಿಲ್ಲದಂತಾಯಿತು. ಮೂರನೆಯ ವರ್ಷ ಹಿಂದೆ ನಿಶ್ಚಯಿಸಿದ್ದಂತೆ ಸುಂದರೇಶನ ವಿವಾಹವು ಅತಿ ಸಂಭ್ರಮದಿಂದ ನಡೆಯಿತು. ವಿವಾಹಕ್ಕೆ ಸತೀಶ, ಸಚೀಂದ್ರ, ಸ್ವರ್ಣಳು, ಇಂದಿರ ಎಲ್ಲರೂ ಹೋಗಿದ್ದರು. ಸುಂದರೇಶನಿಗೆ ವಿವಾಹವಾಗುತ್ತಿದ್ದಂತೆಯೇ ಸತೀಶನಿಗೂ, ಸ್ವರ್ಣಳಿಗೂ ಅವರರಿಯದಂತೆ ಕಣ್ಣೀರು ಸುರಿಯಲಾರಂಭವಾಯಿತು. ಆದರೂ ಎಲ್ಲವನ್ನೂ ಸಹಿಸಿಕೊಂಡು ವಿವಾಹದಲ್ಲಿ ಒಹಳ ಕುತೂಹಲವುಳ್ಳವರಾಗಿಯೇ ಇದ್ದರು. ಎಷ್ಟೇ ಹೊರಗೆ ಕುತೂಹಲಳಾಗಿದ್ದರೂ ಇಂದಿರೆಯ ಮನಸ್ಸಿನ ಖೇದವನ್ನು ವರ್ಣಿಸಲಸಾಧ್ಯವಾಗಿತ್ತು. ಆದರೂ ಉರುಟಣೆ ಮೊದಲಾದ ಕಾಲದಲ್ಲಿ ವಿಧವಿಧವಾದ ಪರಿಹಾಸ್ಯ ಹಾಡುಗಳಿಂದ ಸುಂದರೇಶನ ಪಕ್ಕದಲ್ಲಿಯೇ ಕುಳಿತಿದ್ದು ತನ್ನ ಕುತೂಹಲವನ್ನು ತೋರ್ಪಡಿಸಿದಳು. ಸುಂದರೇಶನ ಮನಸ್ಸಿಗೆ ಇದರಿಂದ ಸ್ವಲ್ಪ ಶಾಂತಿಯುಂಟಾಗುತ್ತಿತ್ತು.

ಈ ವಿವಾಹಕ್ಕೂ ನಾರಾಯಣನು ಬರಲಿಲ್ಲ. ವಿವಾಹಕ್ಕೆ ಕಳುಹಿಸಬೇಡವೇ ಎಂದು ಕಾಳೀಮಣಿಯನ್ನು ಉಪೇಂದ್ರನು ಕೇಳಿದ್ದಕ್ಕೆ ಚೆನ್ನಾಗಿದೆ. ಯಾವ ಸಂಬಂಧದಿಂದ ನಾರಾಯಣನನ್ನು ವಿವಾಹಕ್ಕೆ ಕಳುಹಿಸುವುದು. ಅವನ ಅತ್ತೆಯ ಮನೆ ಸಂಬಂಧದಿಂದ ತಾನೇ ಹೋಗಬೇಕು. ದೀವಳಿಗೆ ಹಬ್ಬಕ್ಕೆ ಕರೆಯುವದಕ್ಕೂ, ಗಣೇಶನ ಹಬ್ಬಕ್ಕೆ ಕರೆಯುವದಕ್ಕೂ ಮಾತ್ರ ಸತೀಶನ ತಾಯಿ ಸತ್ತ ದುಃಖವಂತೆ. ಈಗ ಅಣ್ಣನ ಮಗನ ಮದುವೆಗೆ ಹೋಗುವದಕ್ಕೆ ಮಾತ್ರ ದುಃಖವಿಲ್ಲ ಅಲ್ಲವೇ, ಬಹು ಚೆನ್ನಾಯಿತು. ಏನೂ ಬೇಡ, ಹೋಗು ಎಂದು ಆರ್ಭಟಿಸಿದಳು. ಈಗಲಾದರೂ ನಾರಾಯಣನು ಬರುವನೆಂದು ಎದಿರುನೋಡುತ್ತಿದ್ದ ಸ್ವರ್ಣಳ ಮನಸ್ಸಿಗೆ ಬಹಳ ಖೇದವುಂಟಾಯಿತು. ಇಂದಿರೆಗೂ ಈ ವಿಷಯದಲ್ಲಿ ಸಲ್ಪ ಮನೋವ್ಯಾಕುಲವೇ.

ಈ ರೀತಿಯಾಗಿ ವಿವಾಹವಾಗುತ್ತಲೂ ಬಂಧುಗಳು ತಮ್ಮ ತಮ್ಮ ಗೃಹವನ್ನು ಕುರಿತು ತೆರಳಿದರು. ಕಲ್ಲೀಕೋಟೆಯನ್ನು ತಲಪಿದ ಸುಂದರೇಶನು ತಾನು ಬಿ.ಎ., ಪರೀಕ್ಷೆಯಲ್ಲಿ ಮೊದಲನೆಯವನಾಗಿ ತೇರ್ಗಡೆ ಹೊಂದಿರುವದನ್ನು ಕೇಳಿ ಆಹ್ಲಾದ ಹೊಂದಿದನು. ಈ ವಿಷಯವನ್ನು ಕುರಿತು ಬರೆದು ತಿಳುಹಿಸಬೇಕೆ ಬಹಳವಾಗಿ ಕೇಳಿಕೊಂಡಿದ್ದ ಇಂದಿರೆಗೆ ಮೊದಲು ಪತ್ರವನ್ನು ಬರೆದನು. ಇಂದಿರೆಗೆ ಇನ್ನೂ ಅಷ್ಟು ಧಾರಾಳವಾಗಿ ಬರೆಯಲು ಬಾರದಿದ್ದರೂ, ಸುಂದರೇಶನ ಹಸ್ತಾಕ್ಷರವನ್ನು ಕೂಡ ಸುಲಭವಾಗಿ ಓದಿದಳು. ಆದ್ದರಿಂದ ಅವಳಿಗೊಂದು ಕಾಗದವನ್ನು ಬರೆದು ಬಿಟ್ಟು ತಾನು ಮುಂದೆ ನ್ಯಾಯಪರೀಕ್ಷೆಗೆ ಓದಲು ಬೇಕಾದ ಸಲಕರಣೆಗಳನ್ನು ಒದಗಿಸಿಕೊಳ್ಳಲಾರಂಭಿಸಿದನು. ಸುಂದರೇಶನ ಚಿಕ್ಕಪ್ಪನ ಮಾತಾಪಿತೃವಿಯೋಗವು ಅವನಿಗೆ ತಟ್ಟದಂತೆ ಬಹುಪ್ರೇಮದಿಂದ ನೋಡಿಕೊಳ್ಳುತ್ತಿದ್ದನಾದ್ದರಿಂದ ನ್ಯಾಯ ಪರೀಕ್ಷೆಗೆ ವ್ಯಾಸಂಗಮಾಡಲು ಸುಂದರೇಶನಿಗೆ ಯಾವ ಅಭ್ಯಂತರವೂ ಇರಲಿಲ್ಲ. ಬಹು ಸಂತೋಷದಿಂದ ಮುಂದ ನಡೆಯತಕ್ಕ ಕಾರ್ಯಗಳಿಗೆ ಗಮನ ಕೊಡಲಾರಂಭಿಸಿದನು. ಇಲ್ಲಿ ಈ ರೀತಿಯಾಗಿರಲು ಸುಂದರೇಶನು ಪರೀಕ್ಷೆಯಲ್ಲಿ ತೇರ್ಗಡೆಯಾದನೆಂಬ ವಿಷಯವನ್ನು ಇಂದಿರೆಯ ಮೂಲಕವಾಗಿ ಅರಿತ ನತೇಶನು ಪರಮಾನಂದ ಭರಿತನಾಗಿ ಅವನ ಯೋಗ್ಯತೆಗೆ ತಕ್ಕಂತೆ ಅವನಿಗೇನಾದರೊಂದು ಬಹುಮಾನವನ್ನು ಕೊಡಬೇಕೆಂದು ಉದ್ದೇಶಿಸಿ, ಅದಕ್ಕಾಗಿ ಬೇಸಿಗೆ ರಜಾವನ್ನು ಕಳೆಯಲು ತನ್ನ ಮನೆಗೆ ಬರಹೇಳಿ ಪತ್ರಬರೆದನು. ಮೊದಲೇ ಸುಂದರೇಶನ ಸೌಂದರ್ಯವೂ, ಬುದ್ಧಿಯೂ, ನಮ್ರತೆಯೂ ನತೇಶನನ್ನು ಮೋಹಗೊಳಿಸಿದ್ದುವು. ಅದೂ ಅಲ್ಲದ ತನ್ನ ಪುತ್ರಿಯನ್ನು ಧಾರೆಯೆರೆಯಬೇಕೆಂದಿದ್ದರಿಂದ ಅವನಲ್ಲಿದ್ದ ಪ್ರೇಮವು ಬಲವತ್ತರವಾಗಿದ್ದಿತು. ವಿವಾಹವಾಗಿದ್ದರೂ ಪ್ರೇಮವೂ ಮಾತ್ರ ಕಡಿಮೆಯಾಗಲಿಲ್ಲ. ಅಂಥಾವನು ಪರೀಕ್ಷೆಯಲ್ಲಿಯೂ ಮೊದಲನೆಯವನಾಗಿ ಉತ್ತೀರ್ಣನಾದ್ದರಿಂದ ಪ್ರೇಮವು ಇನ್ನೂ ಹೆಚ್ಚಿತು.

ನತೇಶನಿಂದ ಬರೆಯಲ್ಪಟ್ಟ ಕಾಗದವನ್ನು ನೋಡಿದ ಸುಂದರೇಶನು ಪತ್ರವನ್ನು ತನ್ನ ಚಿಕ್ಕಪ್ಪನಿಗ ತೋರಿಸಲು ಪರಮಾನಂದ

ಭರಿತನಾಗಿ ಸತೀಶನ ಪ್ರೇಮವನ್ನು ಹೊಗಳಿ ಸಂತೋಷವಾಗಿ ಸೋ ದರತ್ತೆಯ ಮನೆಗೆ ಹೋಗಿ ಬರುವಂತೆ ಹೇಳಿ ಕಳುಹಿಸಿದನು. ಸುಂದ ರೇಶನ ಬರುವಿಕೆಯನ್ನು ಪತ್ರದ ಮೂಲಕವಾಗಿ ಅರಿತ ಸತೀಶನು ತಾನೇ ಗಾಡಿಯೊಂದಿಗೆ ರೇಲ್ವೆಯ ನಿಲ್ದಾಣಕ್ಕೆ (Railway Station) ಹೋಗಿ ತನ್ನ ಜೊತೆಯಲ್ಲಿಯೇ ಅವನನ್ನು ಕರೆದುಕೊಂಡು ಬಂದ ನು. ಅವನನ್ನು ನೋಡಬೇಕೆಂಬ ಕುತೂಹಲದಿಂದ ಸ್ವರ್ಣಳೂ, ಇಂದಿರೆಯ ಮನೆಯ ಬಾಗಿಲಿನಲ್ಲಿಯೇ ಕಾದು ನಿಂತಿದ್ದರು. ಸುಂದ ರೇಶನು ಬಂದ ದಿನವು, ಸತೀಶನ ಗೃಹದಲ್ಲಿ ಒಂದು ದೊಡ್ಡ ಹಬ್ಬದ ದಿನದಂತೆ ಆಚರಿಸಲ್ಪಟ್ಟಿತು. ಸತೀಶನ ಮಿತ್ರರಾದ ಅನೇಕ ದೊಡ್ಡ ಉದ್ಯೋಗಸ್ಥರೂ ಆ ದಿನ ಭೋಜನಾನಂತರ ಸತೀಶನು ತನ್ನ ಸೋ ದರಳಿಯನಾದ ಸುಂದರೇಶನನ್ನು ಅಲ್ಲಿಗೆ ಬಂದಿದ್ದ ಪ್ರತಿಯೊಬ್ಬ ಮಿತ್ರರಿಗೂ ಪರಿಚಯ ಮಾಡಿಸಿದನು. ಅವನು ಪರೀಕ್ಷೆಯಲ್ಲಿ ಪ್ರಥ ಮಸ್ಥಾನದಲ್ಲಿ ಉತ್ತೀರ್ಣನಾದದ್ದಕ್ಕಾಗಿ ಒಂದು ಬಹುಮಾನವನ್ನು ಕೊಡಲುದ್ದೇಶಿಸಿ ಅದಕ್ಕಾಗಿ ಒಂದು ವಸ್ತುವನ್ನು ತರಿಸಿದ್ದನು. ಅದರ ಹೆಸರು “ ಫೌಂಟೆನ್ ಪೆನ್” (Fountain pen) ಇದರಲ್ಲಿ, ಒಂದು ಸಲ ಮಸಿಯನ್ನು ತುಂಬಿದರೆ ಮೂರು ಘಂಟೆಯ ಕಾಲ ನಿರಾಯಾಸವಾಗಿ ಬರೆಯಬಹುದು. ಅದರಲ್ಲಿ ಸುಂದರೇಶನ ಹೆಸರು ಕೆತ್ತಲ್ಪಟ್ಟಿತು. ಈ ಪೇನಾವನ್ನು ಇಂದಿರೆಯ ಸ್ವಹಸ್ತದಿಂದಲೇ ಕೊಡಿಸಬೇಕೆಂದು ಸತೀಶನು ಮೊದಲೇ ನಿಶ್ಚೈಸಿದನು. ಇಂದಿರೆಗೆ ಅಕ್ಷರಾಭ್ಯಾಸಮಾಡಿಸಿ ಅವಳ ವಿದ್ಯಾಭಿವೃದ್ಧಿಯನ್ನು ಬಹು ಶ್ರದ್ಧೆ ಯಿಂದ ಮಾಡುತ್ತಿದ್ದ ಗುರುವಾದ್ದರಿಂದ ಬಹುಮಾನವನ್ನರ್ಪಿಸಲು ಇಂದಿರೆಯೇ ತಕ್ಕವಳೆಂದು ನಿಶ್ಚೈಸಿದನು. ಆದ್ದರಿಂದ ತನ್ನ ಮಿತ್ರರ ಮುಂದೆ ಇಂದಿರೆಯನ್ನು ಕರೆದುಅವಳಿಂದ ಸುಂದರೇಶನಿಗೆ ಬಹುಮಾ ನವಾಗಿ ಆ ಲೇಖನಿಯನ್ನು ಕೊಡಹೇಳಿದನು. ಅವಳು ಸ್ವಲ್ಪ ಲಜ್ಜೆ ಯಿಂದ ತೆಗೆದುಕೊಟ್ಟಳು. ಸುಂದರೇಶನು ಸ್ವಭಾವದಲ್ಲಿಯೇ ಇನ್ನೊ ಬ್ಬರು ತನ್ನನ್ನು ಸ್ತೋತ್ರಮಾಡಿದರೆ ಸಹಿಸನು. ಅದರಲ್ಲಿಯೂ ಇಷ್ಟು ಜನರ ಮುಂದೆ ಬಹುಮಾನವನ್ನು ಹೊಂದಲು ಬಹು ಲಜ್ಜಿತ ನಾದನು. ಅದರಲ್ಲಿಯೂ ತನ್ನ ಭಾವಿತ ಪತ್ನಿಯಾಗಿದ್ದ ಇಂದಿರೆ

ಯುಸ್ವಹಸ್ತದಿಂದಲೇ ಸ್ವೀಕರಿಸಲು ಮತ್ತೂ ಲಜ್ಜಿತನಾದನು. ತರುವಾಯ ಸಭೆಕಲೆತು ಎಲ್ಲರೂ ಅವರವರ ಗೃಹಕ್ಕೆ ತೆರಳಿದರು. ಈ ಬಹುಮಾನವನ್ನು ತನ್ನ ಪ್ರಾಣಕ್ಕಿಂತ ಹೆಚ್ಚಾಗಿ ಭಾವಿಸಿ ತಾನೆಲ್ಲಿ ಹೋದರು ತನ್ನ ಸಂಗಡಲೇ ತೆಗೆದುಕೊಂಡು ಹೋಗುತ್ತಾ ತನ್ನ ಹೃದಯೇಶ್ವರಿಯಾಗಿದ್ದ ಇಂದಿರೆಯಿಂದಲೇ ಕೊಡಲ್ಪಟ್ಟಿದ್ದರಿಂದ ತನ್ನ ಗಡಿಯಾರದ ಜೇಬಿನಲ್ಲಿಯೇ ಇಟ್ಟುಕೊಂಡಿರುತ್ತಿದ್ದನು. ತಾನು ಪರೀಕ್ಷೆಯಲ್ಲಿ ಬರಬೇಕಾಗಿದ್ದರೂ, ಇಂದಿರೆಗೆ ಪತ್ರಬರಯಬೇಕಾಗಿದ್ದರೂ ಈ ಲೇಖನಿಯಿಂದ ಹೊರತು ಮತ್ತೇತರಿಂದಲೂ ಬರೆಯುತ್ತಿರಲಿಲ್ಲ.

ಈ ರೀತಿಯಾಗಿ ಸುಂದರೇಶನು ಬೇಸಿಗೆ ರಜವನ್ನೆಲ್ಲಾ ಸತೀಶನ ಪ್ರಾರ್ಥನೆಯಂತೆ ಸತೀಶನ ಗೃಹದಲ್ಲಿಯೇ ಕಳೆದನು. ಇವನು ಇಲ್ಲಿರುವ ಕಾಲದಲ್ಲಿ ಇವನ ಪತ್ನಿಯು ಶುಭಮುಹೂರ್ತದಲ್ಲಿ ಪುಷ್ಪವತಿಯಾದಳೆಂದು ಪತ್ರಬಂದಿತು. ಹಿಂದೆ ಹೇಳಿದಂತೆ ಸ್ತ್ರೀ ವಿದ್ಯಾಭ್ಯಾಸ, ಬಾಲ್ಯ ವಿವಾಹ ಖಂಡನ ಮೊದಲಾದುವುಗಳ ವಿಷಯದಲ್ಲಿ ಶ್ರದ್ಧೆಯು ಇವನಿಗೂ ಇದ್ದವು. ಆದುದರಿಂದಲೇ ಇಂದಿರೆಯನ್ನು ಜಾಗ್ರತೆ ವಿವಾಹ ಮಾಡಿಕೊಳ್ಳಲು ಸಾಧ್ಯವಾಗಲಿಲ್ಲ. ಇವನ ಇಷ್ಟದಂತೆಯೇ ಇವನಚಿಕ್ಕಪ್ಪನೂ ಹದಿಮೂರು ವಯಸ್ಸುಳ್ಳ ಕನ್ಯೆಯನ್ನೇ ವಿವಾಹ ಮಾಡಿದ್ದನು. ಈ ಪತ್ರವನ್ನು ಕಂಡು ಇಂದಿರೆಯೂ ಸ್ವರ್ಣಳೂ ಮಾಡಿದ ಹಾಸ್ಯಕ್ಕೆ ಕೊನೆ ಮೊದಲಿಲ್ಲ. ಇನ್ನು ಮೇಲೆ ಸುಂದರೇಶನಿಗೆ ಸೋದರತ್ತೆಯ ಮನೆಯ ಕಡೆ ಜ್ಞಾಪಕವೇ ಇರಲಾರದೆಂತಲೂ, ರಜಾಕ್ಕೆ ಅತ್ತೆಯ ಮನೆಗೆ ಹೋಗುವನೆಂತಲೂ, ಹೆಂಡತಿಯೂ ಬಹಳ ಬುದ್ಧಿಯುಳ್ಳವಳಾದ್ದರಿಂದ ಮುದ್ದನ್ನಿಟ್ಟು ಗಂಡನನ್ನು ವಶ ಪಡಿಸಿಕೊಳ್ಳುವಳೆಂದೂ, ತಮ್ಮ ಜ್ಞಾಪಕವೇ ಮರೆತು ಹೋಗುವುದೆಂದೂ, ಇನ್ನೂ ಏನೇನೋ ಹೇಳಿ ಹಾಸ್ಯಮಾಡತೊಡಗಿದರು. ಅವನೂ ಮಂದಹಾಸದಿಂದ ಪ್ರತಿಯೊಂದಕ್ಕೂ ಉತ್ತರ ಕೊಡುವನು. ಅದರಲ್ಲೂ ಇಂದಿರೆಯು ಹಾಸ್ಯಮಾಡಿದರೆ ಅವಳನ್ನೇ ತಿರುಗಿ ಹಾಸ್ಯ ಮಾಡುವನು. ಇಂದಿರೆಯು ನಾರಾಯಣನನ್ನು ವಶಪಡಿಸಿ ಕೊಳ್ಳಲು

ಮುದ್ದನ್ನು ತನ್ನ ಹೆಂಡತಿಯನ್ನು ಕೇಳಿ ತೆಗೆದು ಕೊಡುವುದಾಗಿಯೂ ಹೇಳಿದನು. ಈ ರೀತಿಯಾಗಿ ಸುಂದರೇಶನು ರಜಾ ದಿನಗಳನ್ನೆಲ್ಲಾ ಸತೀಶನ ಗೃಹದಲ್ಲಿಯೇ ಕಳೆದನು.

ಕಲಾಶಾಲೆಯು ಪ್ರಾರಂಭವಾಗುತ್ತಲೇ, ಸುಂದರೇಶನು ಕಲ್ಲೀಕೋಟೆಗೆ ಪ್ರಯಾಣವಾದನು. ಆಗ ತಾನೇ ನಿಷೇಕ ಪ್ರಸ್ತವನ್ನೂ ನೆರವೇರಿಸಿ ಬಿಡಬೇಕೆಂದು ಸುಂದರೇಶನ ಚಿಕ್ಕಪ್ಪನಿಗೆ ಬಹಳ ಕುತೂಹಲವಾಗಿತ್ತು. ಇದನ್ನು ಕೇಳಿದ ಸುಂದರೇಶನು ಬಹಳ ವಿನಯದಿಂದಲೂ, ನಮ್ರತೆಯಿಂದಲೂ ಋತುವಾದ ವರ್ಷವೇ ನಿಷೇಕ ಪ್ರಸ್ತವಾಗುವುದು ಶಾರೀರ ಶಾಸ್ತ್ರಕ್ಕೆ ವಿರೋಧವೆಂತಲೂ, ಮಾರನೇ ವರ್ಷ ಮಾಡಿದರ ಶರೀರವು ಪುಷ್ಟಿಯಾಗಿ ಬೆಳೆಯುವುದೆಂತಲೂ, ತರುವಾಯ ಬಲಹೀನತೆ, ನಿಶ್ಶಕ್ತಿ ಮೊದಲಾದ ವ್ಯಾಧಿಗಳಿಗೆ ಅವಕಾಶವಿರದೆಂತಲೂ ಹೇಳಿದನು. ಇದನ್ನು ಕೇಳಿದ ಅವನ ಚಿಕ್ಕಪ್ಪನು ಅವನ ಇಷ್ಟದಂತೆಯೇ ಮಾರನೇ ವರ್ಷ ನಡಸುವುದಾಗಿ ತೀರ್ಮಾನಿಸಿದನು. ತನ್ನ ಪ್ರಾರ್ಥನೆಯನ್ನು ನೆರವೇರಿಸಿದ ಚಿಕ್ಕಪ್ಪನನ್ನು ವಂದಿಸಿ ಯಾವುದೊಂದು ಯೋಚನೆಯೂ ಇಲ್ಲದ ನಿಶ್ಚಿಂತೆಯಾಗಿ ತನ್ನ ಮುಂದಿನ ವಿದ್ಯಾಭ್ಯಾಸಕ್ಕೆ ಗಮನಕೊಟ್ಟನು. ತಾನು ಬರೆಯುವುದಕ್ಕೆ ಲೇಖನಿಯನ್ನು ತೆಗೆಯುವಾಗಲೆಲ್ಲಾ ಅದನ್ನು ತನಗಿತ್ತ ಇಂದಿರೆಯ ಜ್ಞಾಪಕವು ಬರುವುದು. ಈ ರೀತಿಯಾಗಿ ಸದಾ ಇಂದಿರೆಯ ಸ್ಮರಣೆಯಲ್ಲೇ ಇರುತ್ತಿದ್ದನು. ಎರಡು ಮೂರು ತಿಂಗಳುಗಳಾಗುತ್ತಲೂ ಪುನಃ ಇಂದಿರೆಯ ಕಡೆ ಮನಸ್ಸು ಎಳೆಯಲಾರಂಭಿಸಿತು. ಅವಳು ತನ್ನನ್ನು ಮಾಡುತ್ತಿದ್ದ ಹಾಸ್ಯವೂ, ಆ ಸಮಯದಲ್ಲಿ ಅವಳಿದ್ದ ಸೌಂದರ್ಯವೂ ಸದಾ ಅವನ ಕಣ್ಣು ಮುಂದೆಯೇ ಕಟ್ಟಿದಂತಿದ್ದವು. ಅವಳನ್ನು ಕಾಣುವ ಉದ್ದೇಶದಿಂದಲಾದರೂ ನಿಷೇಕ ಪ್ರಸ್ತವನ್ನು ಈಗ ಏತಕ್ಕೋಸ್ಕರ ಇಟ್ಟುಕೊಳ್ಳಕೂಡದೆಂದು ಯೋಚಿಸುವನು. ಆಹಾ! ಇವನಲ್ಲಿ ಇಷ್ಟೊಂದು ವಿಶ್ವಾಸವಿಟ್ಟಿರುವನಲ್ಲಾ. ಅವಳು ಪರ ಪತ್ನಿಯಲ್ಲವೇ? ಅವಳನ್ನು ನಾನು ಯಾತಕ್ಕಾಗಿ ಪ್ರೀತಿಸಬೇಕು? ಇನ್ನೆರಡು ವರ್ಷಗಳು ಅವಳೊಂದಿಗೆ ಮಾತನ್ನಾದರೂ ಆಡಬಹುದು. ತರುವಾಯ

ಅದೂ ಕೂಡ ದುರ್ಲಭವಲ್ಲವೇ ! ಹೀಗಿರುವಲ್ಲಿ ನಾನು ಈ ರೀತಿ ದುಷ್ಟನಂತೆ ಯೋಚಿಸುವುದು ಮಹಾಪಾತಕವು ಎಂದೆಣಿಸಿ ತನ್ನನ್ನು ತಾನೇ ಬೈದುಕೊಳ್ಳುವನು.

ಇಂದಿರೆಯು ದಿನದಿನಕ್ಕೆ ಪೂರ್ಣಿಮೆಯ ಚಂದ್ರನಂತೆ ಪ್ರವರ್ಧಮಾನಳಾಗುತ್ತಾ ಬಂದಳು. ವಿದ್ಯೆಯೂ, ಬುದ್ಧಿಯೂ ದಿನದಿನಕ್ಕೆ ಹೆಚ್ಚಲಾರಂಭಿಸಿದವು. ಆದರೂ ಸುಂದರೇಶನಿಂದ ಕಲಿತಷ್ಟು ಜಾಗ್ರತೆಯಾಗಿ ಈಗ ಕಲಿಯಲಾಗಲಿಲ್ಲವೆಂದು ಸತೀಶನು ತಿಳಿದು ತಕ್ಕ ವಿದ್ಯಾವಂತರಿಂದ ಇಂದಿರೆಗೆ ವಿದ್ಯೆಯನ್ನು ಕಲಿಸಲು ಏರ್ಪಾಡು ಮಾಡಿದನು. ಸುಂದರೇಶನು ಬೋಧಿಸುತ್ತಿದ್ದಂತೆ ಯಾವ ಉಪಾಧ್ಯಾಯನಿಗೂ ಹೇಳಿಕೊಡುವುದಕ್ಕೆ ಬಾರದು ಎಂದು ಊಹಿಸುವಳು. ಹೀಗಿರುತ್ತಿರಲೊಂದಾನೊಂದು ದಿನ ಸತೀಶನಿಗೂ ಇಂದಿರೆಗೂ ಈ ಕೆಳಗೆ ಕಂಡಂತೆ ಸಂಭಾಷಣೆಯು ನಡೆಯಿತು :

ಇಂದಿರೆ—ಅಪ್ಪಾ, ಸುಂದರೇಶನು ಬೇಸಿಗೆ ರಜಾಕ್ಕೆ ಇಲ್ಲಿಗೆ ಬರುವನೆ ?

ಸತೀಶ—ನನಗೆ ತಿಳಿಯದು. ಬರಹೇಳಿ ಪತ್ರ ಬರೆಯೋಣವೆಂದು ಉದ್ದೇಶಿಸಿರುವೆನು.

ಇವರು ಈ ರೀತಿಯಾಗಿ ಮಾತನಾಡುತ್ತಿರುವ ಸಮಯದಲ್ಲಿ ನಾಲ್ಕು ಮೂಲೆಗೂ ಕುಂಕುಮ ಸವರಿದ ಲಗ್ನಪತ್ರಿಕೆಯೊಂದನ್ನು ಅಂಚೆಯವನು ತಂದು ಕೊಟ್ಟನು. ಸತೀಶನು ಅದನ್ನು ತೆಗೆದು ಓದಿ ನೋಡಿ ಇಂದಿರೆಯ ಕೈಗೆ ಕೊಟ್ಟನು. ಅವಳದನ್ನು ಓದುವಾಗಲೇ ನಿಟ್ಟುಸಿರುಬಿಟ್ಟಳು. ಆದರೂ ತಾಪವನ್ನು ಮನಸ್ಸಿನಲ್ಲೇ ಅಡಗಿಸಿಕೊಂಡು ಹಸನ್ಮುಖದಿಂದ ಪತ್ರವನ್ನು ಓದಿ ಮುಗಿಸಿ "ಹಾಗಾದರೆ, ಅವನು ಈವರ್ಷದ ಬೇಸಿಗೆ ರಜಾಕ್ಕೆ ಬಹುಶಃ ಇಲ್ಲಿಗೆ ಬರಲಾರನು," ಎಂದಳು.

ಸತೀಶ :—ಹೌದು; ಅವನು ಇಲ್ಲಿಗೆ ಬರಲಾರನು. ನಾವಾದರೂ ಅಲ್ಲಿಗೆ ಹೋಗಬೇಕು.

ಇಂದಿರೆ :—ಯಾವಾಗ ನಾವು ಇಲ್ಲಿಂದ ಹೊರಡುವುದು ?

ಸತೀಶ :—ನಾಳೆ ಶುಕ್ರವಾರದ ರಾತ್ರಿ ರೈಲಿನಲ್ಲಿ ಪ್ರಯಾಣ ಮಾಡಬೇಕು. ನಾಳೆಗೆ ಎಂಟು ದಿನಗಳಿಗೆ ಪ್ರಸ್ತವಲ್ಲವೆ " ಎಂದು ಹೇಳಿದ ಕೂಡಲೆಇಂದಿರೆಯು ಅತಿವೇಗವಾಗಿ ಮನೆಯೊಳಕ್ಕೆ ಆ ಸಂತೋಷ ಸಮಾಚಾರವನ್ನು ತನ್ನ ತಾಯಿಗೆ ತಿಳಿಸಲು ಓಡಿಹೋದಳು. ಎಲ್ಲರೂ ಸಂತೋಷದಿಂದ ಸುಂದರೇಶನ ನಿಷೇಕಪ್ರಸ್ತಕ್ಕೆ ಹೋಗಲು ಬೇಕಾದದ್ದನ್ನೆಲ್ಲಾ ಸಿದ್ಧಪಡಿಸಿಕೊಂಡು ಶುಕ್ರವಾರದ ದಿನ ರಾತ್ರಿಯ ರೈಲಿನಲ್ಲಿ ಪ್ರಯಾಣ ಮಾಡಿದರು.

ನಾಲ್ಕನೆಯ ಅಧ್ಯಾಯ ಸಂಪೂರ್ಣವು.

---

# ಐದನೆಯ ಅಧ್ಯಾಯ.

---

## ಇಂದಿರೆಯ ದೌರ್ಭಾಗ್ಯ.

ಹಿಂದಿನ ಅಧ್ಯಾಯದಲ್ಲಿ ತಿಳಿಸಿದಂತೆ ಶುಕ್ರವಾರದ ದಿನ ರೈಲಿನಲ್ಲಿ ಹೊರಟ ಸತೀಶನೇ ಮೊದಲಾದವರು ಮೂರನೆಯ ದಿನ ಬೆಳಗ್ಗೆ ನಿಶ್ಚಿತ ಸ್ಥಳವನ್ನು ಸೇರಿದರು. ಸುಂದರೇಶನು ರೈಲ್ ಸ್ಟೇಷನ್ನಿಗೆ ಬಂದು ಇವರುಗಳನ್ನು ತನ್ನ ಮನೆಗೆ ಕರೆದು ಕೊಂಡು ಹೋದನು. ಮೂರನೆಯ ದಿನ ಹೆಣ್ಣಿನ ಮನೆಯವರೂ ಬಂದು ಸೇರಿದರು. ಹಿಂದೆ ತಿಳಿಸಿದ್ದಂತೆ ನಿಷೇಕಪ್ರಸ್ತವು ಸೋಮವಾರದದಿನ ಬಹಳ ವಿಜೃಂಭಣೆಯಿಂದ ನೆರವೇರಿತು. ಈ ಉತ್ಸವದಲ್ಲೆಲ್ಲಾ ಇಂದಿರೆಯೇ ಅಗ್ರಸ್ಥಾನವನ್ನು ವಹಿಸಿದಳು. ಬಹಳ ಉತ್ಸಾಹದಿಂದ ಹಾಡುಹಸೆಗಳನ್ನು ಹೇಳುವುದರಲ್ಲಿಯೂ ದಂಪತಿಗಳನ್ನು ಹಾಸ್ಯಮಾಡುವುದರಲ್ಲಿಯೂ ಕಳೆದಳು. ಇವಳ ಬುದ್ಧಿಶಕ್ತಿಯನ್ನೂ ಸಂಗೀತಜ್ಞಾನವನ್ನೂ, ಮೆಚ್ಚದವರಿಲ್ಲ. ವೀಣೆಯನ್ನು ಸರಸ್ವತಿಯಂತೆ ನುಡಿಸುವಳು. ಸುಂದರೇಶನು ಇವಳ ಹಾಡುಗಳನ್ನೆಲ್ಲಾ ಕೇಳಿ ತನಗೆ ಇವಳನ್ನು ಧಾರೆಯೆರೆ

ಯಲು ನಡೆದ ಏರ್ಪಾಡುಗಳನ್ನೂ ತನ್ನನ್ನು ಅರಿಯಿಸೆಂದು ಸ್ವರ್ಣಳು ಕರೆಯುತ್ತಿದ್ದುದನ್ನೂ, ತಾನು ಅವರಿಗೆ ಪಾಠ ಹೇಳಿಕೊಡುತ್ತಿದ್ದುದನ್ನೂ ನೆನೆಸಿಕೊಂಡು ವ್ಯಾಕುಲಚಿತ್ತದಿಂದ ನಿದ್ರಾಂಗನೆಯ ಪರವಶನಾದನು.

ಮಾರನೆಯ ದಿನ ಮಧ್ಯಾಹ್ನ ಎಲ್ಲರಿಗೂ ಔತಣವಾದನಂತರ ಇಂದಿರೆಯು ಬೀಗರ ಹಾಡು ಹೇಳುವಳೆಂದು ಅನೇಕ ಸ್ತ್ರೀಯರು ನೆರೆದಿದ್ದರು. ಕೆಲವರು ಪುರುಷರೂ ಹಾಡು ಕೇಳುವ ಆಸೆಯಿಂದ ಬಂದಿದ್ದರು. ತನ್ನ ಹಾಡನ್ನು ಕೇಳಲು ಬಹು ಜನರು ಬಂದಿದ್ದರೂ, ಇಂದಿರೆಯು ನಾಚಿಕೊಳ್ಳದೆ ಅವರಿಗೆ ಬೇಕಾದ ಹಾಡುಗಳನ್ನೆಲ್ಲಾ ಹೇಳಿದಳು. ತರುವಾಯ ಭೋಜನಾನಂತರ ಸಾಯಂಕಾಲ ಹೆಣ್ಣನ್ನು ಹಸೆಯಮೇಲೆ ಕೂರಿಸಲು ಬೇಕಾದ ಏರ್ಪಾಡುಗಳೆಲ್ಲಾ ನಡೆಯುತ್ತಿದ್ದುವು. ಊರಲ್ಲೆಲ್ಲಾ ಕರೆದು ಬಂದುದಾಯಿತು. ಸಾಯಂಕಾಲ ನಾಲ್ಕು ಘಂಟೆಗೆ ಹಸೆಯ ಮೇಲೆ ಕೂರಿಸಬೇಕೆಂದು ಏರ್ಪಾಡಾಗಿದ್ದಿತು. ಘಂಟೆಯು ಮೂರಾಯಿತು. ಒಳಗೊಬ್ಬ ಸೇವಕನು ಓಡಿ ಬಂದು "ಅಮ್ಮಾ! ತಂತಿಯೊಂದು ಬಂದಿರುವುದು, ಯಜಮಾನರು ಅಮ್ಮನವರನ್ನು ಕರೆಯುತ್ತಿರುವರು," ಎಂದನು.

ಸ್ವರ್ಣಳು:—ತಂತಿಯೇ! ಎಲ್ಲಿಂದ ಬಂದಿರುವುದು! ಅದಕ್ಕೆ ನಾನೇಕೆ, ಎಂದು ಕೇಳುತ್ತಾ ಬರಲು ಎದುರಾಗಿ ಕೈಯಲ್ಲಿ ತಂತಿಯ ಹಿಡಿದು ಬಂದ ಸತೀಶನು, ಕಣ್ಣೀರನ್ನೊರಸಿಕೊಂಡು "ನಾರಾಯಣನಿಗೆ ಮೈ ಸರಿಯಾಗಿಲ್ಲವಂತೆ, ಅದಕ್ಕಾಗಿ ಉಪೇಂದ್ರನು ತಂತಿಯನ್ನು ಕೊಟ್ಟಿರುವನು," ಎಂದನು.

ಸ್ವರ್ಣಳು:—ಅಯ್ಯೋ.

ಸತೀಶ:—ಕೂಡಲೆ ಹೊರಡು, ಇಂದಿರೆಯನ್ನು ಕರೆದುಕೊಂಡು ಬರಬೇಕೆಂದು ಬರೆದಿರುವರು.

ಸ್ವರ್ಣಳು:—ಅಯ್ಯೋ—ನಾರಾಯಣ! ಇಂದಿರೆಯ ತಲೆಯಲ್ಲಿ ಕಲ್ಲು ಹಾಕಿದೆಯಾ? "ಎಂದಷ್ಟನ್ನು ಕೇಳಿದ ಸತೀಶನು ಕಣ್ಣೀರ

ನ್ನೊರೆಸಿಕೊಂಡು, "ಇಷ್ಟು ಗಾಬರಿಯೇನು, ನಾವು ಹೋಗಿ ತಕ್ಕವೈದ್ಯರಿಂದ ಔಷಧವನ್ನು ಕೊಡಿಸಿದರೆ ಗುಣಹೊಂದುವನು. ಬರೀಜ್ವರ ತಾನೇ; ವಿಚಾರ ಮನಸ್ಕರಾಗಬೇಡ," ಎಂದನು.

ಸ್ವರ್ಣಳು :—ಅಯ್ಯೋ ಏನೂ ಇಲ್ಲದೆ ಸ್ವಸ್ಥನಾಗಬೇಕಲ್ಲ. ಗಾಬರಿಯಾಗದಿದ್ದರೆ ತಂತಿಕೊಡುತ್ತಿದ್ದರೇ ? ಇಲ್ಲಿ ಶುಭಕಾರ್ಯವು ನಡೆಯುತ್ತಿದೆಂಬುದನ್ನರಿತೂ ತಂತಿ ಕೊಟ್ಟದ್ದರಿಂದ ಏನೋ ಅಪಾಯದಲ್ಲಿರಬೇಕು. ಏನೂ ತೋಚದು ದಯಾನಿಧೇ ! ನೀನೇಗತಿ" ಎಂದು ಬೆಂಕಿಗೆ ಬಿದ್ದ ಪತಂಗದಂತೆ ಹೊರಳಲಾರಂಭಿಸಿದಳು.

ಸತೀಶ :—(ಉಕ್ಕಿಬರುವ ದುಃಖವನ್ನಡಗಿಸಿಕೊಂಡು) 'ಸರಿ. ಹೊರಡಲು ಸಿದ್ಧಳಾಗು. ಗಾಡಿ ಬರುತ್ತಲೆ ಹೊರಡಬೇಕು. ಇವರು ಈ ರೀತಿ ಮಾತನಾಡುತ್ತಿರುವ ಸಮಯದಲ್ಲಿ ಗಾಡಿಯು ಬಂದು ಮನೆಯ ಬಾಗಿಲಿನಲ್ಲಿ ನಿಲ್ಲಲು ಅವರು ಯಾರಿಗೂ ತಿಳಿಯದಂತೆ ಪ್ರಯಾಣವಾದರು. ತರುವಾಯ ಆರತಿಗೆ ಬಂದ ಪ್ರತಿಯೊಬ್ಬರೂ ಈ ಸಮಾಚಾರವನ್ನರಿತವರಾಗಿ ಇಂದಿರೆಯ ಬುದ್ಧಿಯನ್ನು ಕೊಂಡಾಡಿ ಅವಳಿಗೇನೂ ಕೇಡಾಗದಿರಬೇಕೆಂದು ದೇವರನ್ನು ಪ್ರಾರ್ಥಿಸಲಾರಂಭಿಸಿದರು.

ಸತೀಶನೂ, ಸ್ವರ್ಣಳೂ, ಇಂದಿರೆಯೂ ರೈಲುಹತ್ತಿ ಹೊರಟು ಹೋದಮೇಲೆ ಸುಂದರೇಶನ ಮನಸ್ಸಿನ ಸ್ಥಿತಿಯನ್ನು ವರ್ಣಿಸಲಾರಿಂದ ಸಾಧ್ಯವು.? ಅವನಿಗೆ ತನ್ನ ಮೈಮೇಲೆ ಜ್ಞಾನವೇ ಇರಲಿಲ್ಲ. ತಾನು ಇಲ್ಲಿರುವುದು ಅಷ್ಟೊಂದು ಅವಶ್ಯಕವಿಲ್ಲದಿದ್ದರೆ ತಾನೂ ಅವರೊಂದಿಗೆ ಹೊರಟು ಬಿಡುತ್ತಿದ್ದನು. ಚಿತ್ತಸ್ವಾಧೀನವಿಲ್ಲದೆ, "ಅಯ್ಯೋ ಏನುಮಾಡುವುದು ? ಇಂದಿರೆಗೇನೂ ಬರದಿರಬೇಕಲ್ಲಾ ! ಎಂದು ನಿಟ್ಟುಸಿರು ಬಿಡುವನು". ಬಂದು ವೇಳೆ ಕಾಳೀಮಣಿಯ ತಂತ್ರವಾಗಿರಬಹುದೋ ಏನೋ" ಎಂದು ಚಿಂತಿಸುವನು. "ಅದರೂ ಇಂಥ ಸಮಯದಲ್ಲಿ ತಂತೀ ಕೊಡುತ್ತಿದ್ದರೇ ? ಸತೀಶನೊಂದಿಗೆ ಸರಸವಾಡಲಾರರಲ್ಲಾ" ಎಂದು ಹಲಬುವನು. ಹೀಗೆ ಸುಂದರೇಶನ ಚಿಂತೆಗೆ ಕೊನೆ ಮೊದಲಿಲ್ಲ. ಮಾರನೆಯ ದಿವಸವೆಲ್ಲಾ ಯಾವ

ಸಮಾಚಾರವೂ ತಿಳಿಯುತ್ತಿಲ್ಲ. ಸ್ವಲ್ಪ ಸ್ವಸ್ಥವಾಗಿದ್ದರೆ ಕೂಡಲೇ ಬರೆಯುವನಾಗಿ ಸತೀಶನು ಹೇಳಿ ಹೋದನಲ್ಲಾ. ಇಲ್ಲಿಯವರೆಗೂ ಪತ್ರಬರೆದಿರಲು ಕಾರಣವೇನು ! ಒಂದುವೇಳೆ ಏನಾದರೂ ವಿಪರೀತವಾಗಿ ಪರಿಣಮಿಸಿರುವುದೋ ! ಛೀ ಹಾಗೆಂದೂ ಇರಲಾರದು. ಇಷ್ಟೊಂದು ಗುಣವಿಶೇಷಗಳಿಂದ ಕೂಡಿರುವ ಇಂದಿರೆಗೆ ಇಂಥಾ ಗತಿಯು ಪ್ರಾಪ್ತವಾದರೆ ಈ ಮೇಲೆ ನ್ಯಾಯಾನ್ಯಾಯವೆಲ್ಲಿರುವುದು ? ದೇವರಿರುವದಕ್ಕೆ ಗುರುತೇನು ! ಆದುದರಿಂದ ನಾರಾಯಣನಿಗೆ ಚಿಕಿತ್ಸೆಮಾಡಿಸುವ ಗಾಬರಿಯಲ್ಲಿ ಪತ್ರ ಬರೆಯಲು ಮರೆತಿರಬಹುದು. ಬಹುಶಃ ನಾಳೆ ಪತ್ರ ಬರಬಹುದು" ಎಂದು ತನ್ನನ್ನು ತಾನೇ ಸಂತೈಸಿಕೊಳ್ಳುತ್ತಿದ್ದಳು.

ಇತ್ತಲಾಗಿ ಇಂದಿರೆಗಾದರೋ ತಾನು ಊರಿಗೆ ಹೋಗುವ ಕಾರಣವೇ ತಿಳಿಯದು. ತಾಯಾಗಲಿ ತಂದೆಯಾಗಲಿ ಉಸಿರೆತ್ತಲಿಲ್ಲ. ನಾರಾಯಣನಿರುವ ಊರಿಗೆ ಒಂದೇ ಸಾರಿ ಹಾರಿಹೋಗಿ ಹನುಮಂತನು ಲಂಕೆಗೆ ಹಾರಿದಂತೆ ಹಾರಬೇಕೆಂದಪೇಕ್ಷಿಸಿದರೂ ಇಂದಿರೆಯೂ ಕಾರಣವನ್ನು ಸ್ವಲ್ಪಸ್ವಲ್ಪವಾಗಿ ತಿಳಿದುಕೊಂಡಳು. ಏನುಮಾಡಿಯಾಳು ? ಹೊಟ್ಟೆಯಲ್ಲಿ ಮಟ್ಟಿಗೆ ಸಂಕಟವುಂಟಾಗುತ್ತಿತ್ತು. ಒಂದುವೇಳೆ ಏನಾಗುವುದೋ ಎಂಬ ಭಯವೂ, ಇದರಿಂದ ತನಗೇನಾದರೂ ಅಪಾಯ ಸಂಭವಿಸುವುದೋ ಏನೋ ಎನ್ನುವ ಭಯವೂ ಅವಳಿಗೆ ಲೇಶಮಾತ್ರವೂ ಇರಲಿಲ್ಲ. ಕಾಹಿಲೆ ಬರುವುದೂ ಸ್ವಸ್ಥವಾಗುವುದೂ ಸಹಜವೆಂದೇ ತಿಳಿದಳು. ಆದರೂ ಸಂಕಟಮಾತ್ರವಾಗುತ್ತಿತ್ತು.

ಇಷ್ಟೊಂದು ಆತುರದಿಂದ ಹೋಗುತ್ತಿರುವವರಿಗೆ ವಾಯುವೇಗ ಮನೋವೇಗವಾಗಿ ಹೋಗತಕ್ಕ ರೈಲು ಬಂಡಿಯು ಕೂಡ ಮೆಲ್ಲಗೆ ಹೆಜ್ಜೆಯಿಡುವಂತಿತ್ತು. ಕೊನೆಗೆ ಉದ್ದೇಶ ಸ್ಥಳವನ್ನು ತಲಪುತ್ತಲೇ ಅಲ್ಲಿಗೆ ನಾರಾಯಣನ ಚಿಕ್ಕಪ್ಪನು ಬಂದಿದ್ದನು. ಅವನನ್ನು ಕಾಣುತ್ತಲೂ ಇವರಿಗೆ ಸ್ವಲ್ಪ ಹರ್ಷವುಂಟಾಯಿತು. ಅವನಿಂದ ನಾರಾಯಣನ ದೇಹಸ್ಥಿತಿಯನ್ನು ತಿಳಿದುಕೊಂಡು ಜಟ್ಕಾಗಾಡಿಯೊಂದನ್ನು

ಬಾಡಿಗೆಗೆ ತೆಗೆದುಕೊಂಡು ಉಪೇಂದ್ರನ ಗೃಹವನ್ನು ಕುರಿತು ತೆರಳಿದರು. ಉಪೇಂದ್ರನ ಮನೆಯ ಬಳಿಗೆ ಹೋಗುತ್ತಲೂ ದೀನವಾದ ರೋದನ ಧ್ವನಿಯೊಂದು ಕೇಳಿಬಂತು. ಸತೀಶನು ರೋದನ ಧ್ವನಿಯು ತನಗೆ ಕೇಳಿಸಲಿಲ್ಲವೆಂದೂ, ಸ್ವರ್ಣಳಿಗೆ ಭ್ರಮೆಯಾಗಿರುವುದೆಂದೂ ಹೇಳಿದನು. ನಿಜವಾಗಿಯೂ ರೈಲಿಗೆ ಉಪೇಂದ್ರನ ತಮ್ಮನು ಹೋದ ಕೂಡಲೇ ನಾರಾಯಣನ ಪ್ರಾಣವೂ ಹೋಗಿದ್ದಿತು. ಮನೆಯ ಹತ್ತಿರಕ್ಕೆ ಬಂದು ಸಂಗತಿಯನ್ನರಿತ ಸತೀಶನೂ, ಸ್ವರ್ಣಳೂ ಮೂರ್ಛೆಯಾಗಿ ಕೆಳಗೆ ಬಿದ್ದುಬಿಟ್ಟರು. ಅಲ್ಲಿರುವ ಕೆಲ ಪುರುಷರು ಸತೀಶನನ್ನೂ, ಸ್ತ್ರೀಯರು ಸ್ವರ್ಣಳನ್ನೂ ಸಂತೈಸಿ ಮನೆಗೆ ಕರೆದುಕೊಂಡು ಹೋದರು. ಇಷ್ಟು ತೊಂದರೆಯಲ್ಲೂ ಇಂದಿರೆಯು ಗಾಡಿಯಿಂದ ಕದಲಲೇ ಇಲ್ಲ. ಅವಳಿಗೆ ಸ್ವತಃ ಬುದ್ಧಿಯೇ ಇರಲಿಲ್ಲ. ತನ್ನನ್ನೆಲ್ಲಿಯೋ ಹೊತ್ತುಕೊಂಡು ಹೋಗುವಂತಾಯಿತು. ಹುಚ್ಚಿಯಂತೆ ನಾಲ್ಕು ದಿಕ್ಕುಗಳಲ್ಲಿಯೂ ನೋಡಲಾರಂಭಿಸಿದಳು. ಮೂರ್ಛೆಯಿಂದೆದ್ದ ಸ್ವರ್ಣಳು ಗಾಡಿಯ ಬಳಿ ಬಂದು ಇಂದಿರೆಯನ್ನು ಕೆಳಕ್ಕಿಳಿಸಿ, “ಅಯ್ಯೋ ! ಇಂದಿರೇ, ನಿನ್ನ ತಲೆಯಲ್ಲಿ ಕಲ್ಲುಬಿತ್ತಲ್ಲಾ ” ಎಂದು ಪ್ರಲಾಪಿಸಿದಳು. ಕೂಡಲೇ ಇಂದಿರೆಯೂ ಅಳತೊಡಗಿದಳು. ಆಗ ಕಾಳೀಮಣಿಯು ಬಂದು ಇಂದಿರೆಯನ್ನು ಕೈ ಹಿಡಿದು ಒಳಕ್ಕೆ ಕರದುಕೊಂಡು ಹೋದಳು. ಒಳಗೆ ಹೋದ ಇಂದಿರೆಯು “ಅಯ್ಯೋ, ನನ್ನನ್ನು ನಾರಾಯಣನ ಬಳಿಗೆ ಕರೆದುಕೊಂಡುಹೋಗಿ. ಅವರನ್ನು ಒಂದು ಸಲವಾದರೂ ಮನದಣಿಯುವಂತೆ ನೋಡುವೆನು. ಮದುವೆಯಾದಂದಿನಿಂದ ನಾನು ಒಂದು ಸಲವಾದರೂ ಅವರ ಮುಖದರ್ಶನವನ್ನು ಕೂಡ ಮಾಡಲಿಲ್ಲ. ಅಯ್ಯೋ ! ನನ್ನಗತಿ ಹೀಗಾಯಿತೆ ? ” ಎಂದು ರೋದಿಸಿದಳು. ನಾರಾಯಣನಬಳಿ ಕರೆದುಕೊಂಡು ಹೋಗುತ್ತಲೂ, ತನ್ನ ತಲೆಯನ್ನು ಹೊಡೆದುಕೊಂಡು, ತಲೆಯಲ್ಲಿರುವ ಹೂಗಳನ್ನು ಕಿತ್ತು ಹೆಣದ ಮೇಲೆ ಬಿದ್ದು “ಅಯ್ಯೋ, ನನ್ನನ್ನಗಲಿದೆಯಾ ? ನನ್ನಲ್ಲಿ ಒಂದು ಮಾತುಕೂಡ ಆಡಲಿಲ್ಲವಲ್ಲಾ ! ಈಗಲಾದರೂ ಕಣ್ಣು ತೆರದು ನೋಡಬಾರದೇ. ನಾನಂಥಾ ಪಾಪಿಯೇ ” ಎಂದು ಪ್ರಲಾಪಿಸಿದಳು. ಅಲ್ಲಿದ್ದವರೆಲ್ಲರೂ ಇವಳಸೌಂದರ್ಯವನ್ನೂ,

ಯವ್ವನವನ್ನೂ, ಇವಳ ಬುದ್ಧಿಯನ್ನೂ ನೋಡಿ ಆ ಕಷ್ಟವು ತನಗೆ ಪ್ರಾಪ್ತವಾದಂತೆ ಗೋಳಾಡಿದರು. ಈ ರೀತಿಯಾಗಿ ಇಂದಿರೆಯು ತನ್ನ ತಾಯಿಯ ಮಡಿಲಲ್ಲಿ ತಲೆಯಿಟ್ಟುಕೊಂಡು ನಾರಾಯಣನ ಹೆಣವನ್ನು ನೋಡಿ ಕಣ್ಣೀರು ಸುರಿಸುತ್ತಿದ್ದಳು. ಇನ್ನೇನು ಮಾಡಿಯಾಳು? ಚಿಕ್ಕ ಹುಡುಗಿ, ಏನೂ ಅರಿಯದವಳು. ನಾರಾಯಣನು ಸತ್ತನೆಂದು ವ್ಯಥೆ ಪಟ್ಟಳೇ ಹೊರತು, ತನ್ನ ಭವಿಷ್ಯತ್ ಸ್ಥಿತಿಯನ್ನು ಕುರಿತು ಅತ್ತವಳಲ್ಲ. ಪ್ರಪಂಚದಲ್ಲಿರುವರೆಲ್ಲರೂ ಒಳ್ಳೆಯವರೆಂತಲೂ, ಅನುತಾಪವುಳ್ಳವರೆಂತಲೂ, ಅನಾಥರನ್ನು ಆದರಿಸುವರೆಂತಲೂ ತಿಳಿದಿದ್ದವಳು ತನ್ನ ಆಪ್ತರಂತೆ ನಟಿಸಿ ತನ್ನನ್ನು ಈ ಹಾಳು ಬಾವಿಗೆ ತನ್ನ ತಾಯಿ ತಂದೆಯರೇ ತಳ್ಳಿರುವರೆಂಬುದನ್ನು ಸ್ವಲ್ಪವೂ ತಿಳಿಯಲಿಲ್ಲ. ಇಂಥಾ ನಿರ್ಭಾಗ್ಯ ವನಿತೆಯರನ್ನು ಭಗವಂತನೇ ಕಾಪಾಡಬೇಕು. ತಮ್ಮ ಪುತ್ರಿಯ ಸ್ಥಿತಿಯನ್ನು ಪೂರ್ಣವಾಗರಿತ ಸತೀಶನೂ, ಸ್ವರ್ಣಳೂ ದುಃಖಸಾಗರದಲ್ಲಿ ಮುಳುಗಿದವರಾದರು. ಈ ರೀತಿಯಾಗಿ ಬಹು ದುಃಖದಿಂದ ಆ ರಾತ್ರಿಯನ್ನು ಕಳೆದು ಮಾರನೆಯ ದಿನಬೆಳಗ್ಗೆ ಶವಕ್ಕೆ ಮಾಡತಕ್ಕ ಕ್ರಿಯೆಗಳನ್ನು ಅವನ ತಮ್ಮನಿಂದ ಮಾಡಿಸಿ, ಇಂದಿರೆಯನ್ನು ಕರೆದುಕೊಂಡು ಸತೀಶನು ತನ್ನ ಊರಿಗೆ ಹೊರಟುಹೋದನು.

ಐದನೆಯ ಅಧ್ಯಾಯ ಸಂಪೂರ್ಣಂ.

---

# ಆರನೆಯ ಅಧ್ಯಾಯ.

---

### ಸುಂದರೇಶನ ಚಿಂತೆ.

ಅತ್ಯಾತುರದಿಂದ ಸತೀಶನ ಪತ್ರವನ್ನು ಇದಿರು ನೋಡುತ್ತಿದ್ದ ಸುಂದರೇಶನಿಗೆ ಪತ್ರವೂ ಸಕಾಲದಲ್ಲಿತಲಪಿತು. ನ್ಯಾಯವಾಗಿ ಉಪೇಂದ್ರನಿದ್ದ ಊರಿನಿಂದ ಬರಬೇಕಾಗಿರುವಲ್ಲಿ ಸತೀಶನ ಊರಿನಿಂದ ಬರಬೇಕಾದ ಕಾರಣವೇನಿರುವುದು ! ಇಷ್ಟು ಜಾಗ್ರತೆ ಸತೀಶನು ಊರಿಗೆ ಹಿಂತಿರುಗಿದನೇ ? ಒಂದು ವೇಳೆ ತಕ್ಕ ವೈದ್ಯರನ್ನು ಕರೆತರಲು

ಬಂದಿರಬಹುದೇನೋ ಎಂದು ಚಿಂತಿಸಿ ಪತ್ರವನ್ನು ಬಿಚ್ಚಿ ಎರಡು ಸಾಲುಗಳನ್ನು ಓದುತ್ತಲೇ ಮೂರ್ಛಿತನಾಗಿ ಕೆಳಗೆ ಬಿದ್ದು ಬಿಟ್ಟನು. ಪಾಕಶಾಲೆಯಲ್ಲಿದ್ದ ಅವನ ಚಿಕ್ಕಮ್ಮನು ಓಡಿಬಂದು, "ಸುಂದರೇಶ! ಇದೇನೀಅವಸ್ಥೆ? ಪತ್ರದಲ್ಲೇನು ಬರೆದಿರುವುದು" ಎಂದು ಬಹು ಆತುರದಿಂದ ಕೇಳಿದಳು. ಇದನ್ನುಕೇಳುತ್ತಲೇ ಸುಂದರೇಶನು ಉತ್ತರ ಕೊಡಲಸಮರ್ಥನಾಗಿ ಗಟ್ಟಿಯಾಗಿ ಗೋಳಾಡಲಾರಂಭಿಸಿದನು. ವಿಷಯವನ್ನರಿತ ಚಿಕ್ಕಮ್ಮನು ದುಃಖವನ್ನರಿಯಲಾರದೆ ಪ್ರಲಾಪಿಸಲಾರಂಭಿಸಿದಳು. ಎಲ್ಲರಿಗೂ ಪ್ರೀತಿಯುಂಟಿದ್ದ ಇಂದಿರೆಗೆ ಬಂದ ದುಃಖವನ್ನು ಯಾರುತಾನೇ ಸಹಿಸಿಯಾರು! ಅದರಲ್ಲೂ ಸುಂದರೇಶನ ಚಿಕ್ಕಮ್ಮನು ಇಂದಿರೆಯನ್ನು ಬಾಲ್ಯದಿಂದ ಸಲಹಿದವಳು. ಯಾವಾಗ ನೋಡಿದರೂ ನಗುಮುಖವೂ, ಪ್ರಕಾಶವಾದ ಕಣ್ಣುಗಳೂ, ಅವಳು ಹೇಳುತ್ತಿದ್ದ ಹಾಡುಗಳೂ, ಕಣ್ಣಿಗೆ ಕಟ್ಟಿದಂತಿದ್ದವು. ಅವಳು ಹೇಳಿದ್ದ ಸಂಗೀತನಾದವು ಇನ್ನೂ ಆ ಊರಿನಲ್ಲ ನಿಂತಿರಲಿಲ್ಲ. ಯಾರ ಬಾಯಲ್ಲಿ ನೋಡಿದರೂ ಇಂದಿರೆಯ ಮಾತೇ! ಇಂಥಾ ಸುಂದರಿಗೆ ವೈಧವ್ಯಪ್ರಾಪ್ತವಾದರೆ ದುಃಖಿಸದಿರುವರಾರು?

ಈ ರೀತಿಯಾಗಿ ಶುಭ ಕಾರ್ಯವು ನಡೆದ ಎರಡು ದಿನಗಳಿಗೆಲ್ಲಾ ರೋದನ ಧ್ವನಿಯುಂಟಾದುದನ್ನು ಕೇಳಿ ನೆರೆಹೊರೆಯಲ್ಲಿರುವವರು ಕುತೂಹಲದಿಂದ ಸುಂದರೇಶನಿದ್ದ ಮನೆಗೆ ಬಂದು ವಿಷಯವನ್ನರಿತವರಾಗಿ ಇಂದಿರೆಗೆ ಬಂದ ದುಃಖವು ತಮಗೆ ಬಂದದ್ದಾಗಿ ಭಾವಿಸಿ ದುಃಖಿಸಿದರು. ಸಾಯಂಕಾಲದೊಳಗೆ ಈ ವರ್ತಮಾನವು ಊರಲ್ಲೆಲ್ಲಾ ಹರಡಿ ಇಂದಿರೆಯ ದೌರ್ಭಾಗ್ಯಕ್ಕಾಗಿ ಕಣ್ಣೀರು ಸುರಿಸಿದರು. ಕೆಲಸದ ಮೇಲೆ ಹೋಗಿದ್ದ ಸುಂದರೇಶನ ಚಿಕ್ಕಪ್ಪನು ಈ ವರ್ತಮಾನವನ್ನು ಕೇಳಿ ರೋದಿಸಿದನೆಂಬುದನ್ನು ಹೇಳಬೇಕೇ!

ಇವನ ಸ್ಥಿತಿಯು ಈ ರೀತಿಯಾಗಿರುವಾಗ ಸುಂದರೇಶನ ವಿಷಯವನ್ನು ನೋಡೋಣ. ಸದಾ ಜೊತೆಯಲ್ಲಿಯೇ ಇರುತ್ತಿದ್ದುದರಿಂದ ಅವಳು ಬೇರೊಬ್ಬನ ಹೆಂಡತಿಯಾಗಿದ್ದರೂ ಪ್ರೇಮವು ಮಾತ್ರ ಹೋಗಿರಲಿಲ್ಲ. ಸುಂದರೇಶನ ಮನಸ್ಸಿಗೆ ಬಹಳ ಖೇದವುಂಟಾಗುವು

ದೆಂದು ತಿಳಿದೇ ಸತೀಶನು ಅವನಿಗೆ ದುಃಖ ಶಮನವುಂಟಾಗುವಂತೆ ಎಲ್ಲಾ ವಿಧಿವಿಲಾಸವೆಂತಲೂ, ದೈವಸಂಕಲ್ಪವೆಂತಲೂ ಬರೆದಿದ್ದನು. ಇಷ್ಟೊಂದು ಬರೆದಿದ್ದರೂ ಕೂಡ ಪತ್ರದ ಮೊದಲನೇ ಸಾಲನ್ನೋದುವಾಗಲೇ ಮೂರ್ಛೆಯಾಗಿ ಬಿದ್ದುಬಿಟ್ಟನು. ಸುಂದರೇಶನನ್ನು ಕಾಪಾಡಬೇಕೆನ್ನುವ ಚಿಂತೆಯು ಅವನ ಚಿಕ್ಕಪ್ಪನಿಗೆ ಹತ್ತಿತು. ಅವನಿಗೂ ಇಂದಿರೆಗೂ ಇದ್ದ ಪ್ರೇಮವು ಸರ್ವರಿಗೂ ತಿಳಿದೇ ಇದ್ದಿತು.

ಪತ್ರವನ್ನು ನೋಡಿದ ದಿನವೆಲ್ಲಾ ಸುಂದರೇಶನಿಗೆ ಜ್ಞಾನವೇ ಇರಲಿಲ್ಲ. ಚಿಕ್ಕಮ್ಮನಾಗಲಿ ಚಿಕ್ಕಪ್ಪನಾಗಲಿ ಬಂದು ಸ್ನಾನ ಮಾಡೆಂದರ ಮಾಡುತ್ತಲೂ, ಊಟ ಮಾಡೆಂದರೆ ಊಟ ಮಾಡುತ್ತಲೂ ಇದ್ದನು. ಹೀಗೆಯೇ ಬುದ್ಧಿಭ್ರಮಣೆಯುಂಟಾಗುವುದೋ ಏನೋ ಎಂದು ಸರ್ವರೂ ಚಿಂತಿಸಿದರು. ಸ್ವಲ್ಪ ದಿನಗಳಿಗೆಲ್ಲಾ ಬುದ್ಧಿಯು ಸರಿಯಾಗುತ್ತಾ ಬಂತು. ಆದರೂ ಹದಿನೈದು ದಿನಗಳವರಿಗೂ ಓದ ಲಸಮರ್ಥನಾಗಿದ್ದನು. ಐದು ನಿಮಿಷಗಳು ಕೂಡ ಕೈಯಲ್ಲಿ ಪುಸ್ತಕ ವಿಲ್ಲದಿರುವವನು ಪುಸ್ತಕವನ್ನು ಮುಟ್ಟಲೇ ಇಲ್ಲ. ಕಾಲ ಕ್ರಮದಲ್ಲಿ ಓದಿನಕಡೆ ಲಕ್ಷ್ಯಕೊಡಲಾರಂಭಿಸಿದನು. ಆದರೂ ಇಂದಿರೆಯ ಗತಿಯನ್ನೂ ವಿಧಿಯನ್ನೂ ಮಾತ್ರ ಮರೆಯಲಸಮರ್ಥನಾದನು. ಹೀಗಿರುತ್ತಿರಲೊಂದುದಿನ ಇಂದಿರೆಯ ಜ್ಞಾಪಕವು ಬಾಧಿಸಲು ಕೆಳಗೆಕಂಡಂತೆ ತನ್ನೊಳು ತಾನೇ ಚಿಂತಿಸಲಾರಂಭಿಸಿದನು. "ಅಯ್ಯೋ! ಏನು ಮಾಡಲಿ! ನನಗೆ ಇಂದಿರೆಯನ್ನು ಕಾಣದಿರುವುದೇ ಮಹಾ ಕಷ್ಟವಾಗಿದೆ. ಹೇಗೆ ಅವಳನ್ನು ನೋಡುವೆನು. ಅವಳ ಮುಖಕಾಂತಿಯೂ, ಮಂದ ಹಾಸವೂ ಎಲ್ಲೋ ಮಾಯವಾಗಿರಬಹುದು! ಅಯ್ಯೋ! ಇಷ್ಟೊಂದು ಸೌಂದರ್ಯವೂ ಬುದ್ಧಿಯೂ ವಿನಯವೂಳುಳ್ಳ ಇಂದಿರೆಗೆ ಇಂಥ ವಿಪತ್ತು ಪ್ರಾಪ್ತವಾಯಿತಲ್ಲಾ? ಇಷ್ಟೊಂದು ಉತ್ತಮ ಗುಣಗಳಿಂದ ಕೂಡಿ ಏನೂ ಅರಿಯದ ಮಗುವಾದ ಇಂದಿರೆಯನ್ನು ಇಂಥ ವಿಪತ್ತಿಗೊಳಗುಮಾಡಿದ ದೈವವೇ ದೈವವು! ಇಂಥ ಅನ್ಯಾಯಗಳನ್ನು ನೋಡಿದರೆ ದೈವವಿಲ್ಲವೆಂಬುದು ಚೆನ್ನಾಗಿ ವ್ಯಕ್ತವಾಗುವುದಲ್ಲವೇ! ನಮಗಿಂತಲೂ ಸರ್ವಶಕ್ತನಾಗಿ ಎಲ್ಲಾ ಸ್ಥಳಗಳಲ್ಲಿಯೂ, ಎಲ್ಲಾ ಕಾಲದಲ್ಲಿಯೂ ತುಂಬಿದ್ದು, ಎಲ್ಲರ ಕಾರ್ಯಗಳನ್ನೂ ನೋಡುವ, ಎ

ಲ್ಲರ ದೀನಸ್ತೋತ್ರಗಳನ್ನೂ ಕೇಳುವಶಕ್ತಿಹೊಂದಿದ, ದಯಾಸಮುದ್ರ ನೆಂಬ ಭಗವಂತನೊಬ್ಬನಿದ್ದರೆ ಇಂಥಾ ಅಕ್ರಮವು ನಡೆಯುತ್ತಿತ್ತೇ ! ಇಂಥಾ ಕಷ್ಟಗಳಿಂದ ಇಂದಿರೆಯಂತಹ ನಿರ್ಗತಿಕರಾದ ಜೀವಿಗಳನ್ನು ರಕ್ಷಿಸಲಾರದಂಥಾ ದಯೆಯಿಂದೇನು ಪ್ರಯೋಜನ ! ದೇವರಿದ್ದೇನು ಪ್ರಯೋಜನ ? ಅವಳ ವಿಧಿಯನ್ನು ಅವಳನುಭವಿಸುವಳೆಂದರ ವಿಧಿಯೇ ಪ್ರಧಾನ ವಾಗುವುದಲ್ಲವೆ ? "ಅವನಿಲ್ಲದೆ ಯಾವ ಕೆಲಸವೂ ನಡಯುವುದಿಲ್ಲ ಎನ್ನುವರು." ಅಯ್ಯೋ ! ಏನು ಮಾಡಲಿ ? ಈ ಹಿಂದೂ ದೇಶವೂ, ಇದರಲ್ಲಿರುವ ಜನರೂ ಎಂದು ಮುಂದಕ್ಕೆ ಬರುವರೋ ? ಹಿಂದುಗಳು ಅಭಿವೃದ್ಧಿಯಾಗದೆ ದೇಶವನ್ನು ವೃದ್ಧಿಗೊಳಿಸದೆ ಇರುವುದು ಅವರ ಪದ್ಧತಿಗಳೇ ಅಲ್ಲವೆ ? ಯಾವಯಾವ ಕಾಲದಲ್ಲಿ ಯಾವಯಾವುದನ್ನನುಸರಿಸಬೇಕೋ ಯಾವಕಾಲದಲ್ಲ ಯಾವ ನಿಬಂಧನೆಗಳನ್ನು ಹಳೆಯುವಸ್ತ್ರದಂತೆ ಕಳೆಯಬೇಕೋ ಅವುಗಳನ್ನು ಹಾಗೆ ಮಾಡದೆ ಇರುವುದರಿಂದ ಅಲ್ಲವೇ ಮುಂದೆ ಎಲ್ಲಾ ದೇಶಕ್ಕೂ ಎಲ್ಲಾ ಜನಾಂಗಕ್ಕೂ ಕಿರೀಟ ಪ್ರಾಯವಾಗಿ ಶೋಭಿಸುತ್ತಿದ್ದ ನಮ್ಮೀ ಭರತಖಂಡವು ಇವತ್ತೊಂದು ಹೀನಸ್ಥಿತಿಗೆ ಬಂದಿರುವುದೆಂದು ಅನೇಕ ದೇಶಾಭಿಮಾನಿಗಳೂ, ಪಂಡಿತರೂ ಮೊರೆಯಿಡುತ್ತಿರುವರು. ಪೂರ್ವ ಕಾಲದವರ ಆಚರಣೆಗೆ ತಕ್ಕಂತೆ ಮಾಡಿದ್ದ ಸ್ಮೃತಿ ಮೊದಲಾದ ಗ್ರಂಥಗಳನ್ನೂ, ಸೂತ್ರಗಳನ್ನೂ ಆಸ್ಥಿತಿಯೇ ಬೇರ್ಪಟ್ಟಿರುವ ಈ ಕಾಲದವರು ಅನುಸರಿಸುವುದು ಕೇವಲ ಮತಿಹೀನವಲ್ಲವೇ ! ಆ ವಿಧಿಗಳಲ್ಲಿ ಹೇಳಿರುವಂತೆ ವೈದಿಕ ವೃತ್ತಿಯನ್ನನುಸರಿಸಿ ಅಗ್ನಿಹೋತ್ರ ವೈಶ್ವದೇವಗಳನ್ನು ಮಾಡುತ್ತಿರುವವರೆಷ್ಟು ಮಂದಿ ಇರುವರು ? ಸಂಧ್ಯಾವಂದನೆ ಮಾಡುವರೇ ಆಚಾರ್ಯರೆಂದು ಭಾವಿಸಲ್ಪಟ್ಟಿರುವ ಈ ಕಾಲದಲ್ಲಿ ನಿರ್ಗತಿಕರಾಗಿ ನಿಸ್ಸಹಾಯಕರಾಗಿ ಪರಿತಪಿಸುತ್ತಿರುವ ಇಂತಹ ಅಬಲೆಯರ ವಿಷಯದಲ್ಲೇ ಇವರ ಶಾಸ್ತ್ರಪ್ರಯೋಗ ಮಾಡಬೇಕೇ? ಸ್ಮೃತಿಯನ್ನನುಷ್ಠಿಸುವವರೆಷ್ಟು ಮಂದಿ ? ಸಂಧ್ಯಾವಂದನೆಮಾಡುವವರೆಷ್ಟು ಮಂದಿ ? ಪ್ರತಿಯೊಬ್ಬ ತಂದೆಯೂ ತನ್ನ ಪುತ್ರರು ಕ್ರಮವಾಗಿ ಸಂಧ್ಯಾವಂದನೆ ಮಾಡುವರೇ ಎಂಬುದನ್ನು ಚೆನ್ನಾಗಿ ಯೋಚಿಸಲಿ. ಹಾಗೆ ಮಾಡದವರನ್ನು

ಯಾವ ಶಿಕ್ಷೆಗೆ ಒಳಪಡಿಸಿದರು ? ಪಿತೃತರ್ಪಣವನ್ನೂ ಶ್ರಾದ್ಧವನ್ನೂ ಕೂಡ ತ್ಯಜಿಸಿದ ಪತಿತರನ್ನು ಯಾವ ನಿಬಂಧನೆಗೊಳಪಡಿಸಿರುವರು ! ಇವುಗಳನ್ನೆಲ್ಲಾ ಕಣ್ಣಿನಿಂದ ನೋಡಿಯೂ ನೋಡದವರಂತೆ ಇದ್ದು ಪುರುಷರ ಪೌರುಷವನ್ನೂ ಬಲವನ್ನೂ ಬುದ್ಧಿಯನ್ನೂ ದಯೆಯನ್ನೂ ನೆಲಗೊಳಿಸಲು ಕಾರಣಭೂತರಾದ ಸ್ತ್ರೀಯರು ವಿಕ್ಕಿಕ್ಕಿಳಿದೆ ಗೋಳಿಡುವದನ್ನು ಕೇಳಿಯೂ ಅವರಲ್ಲ ನಿರ್ದಯರಾಗಿರಬಹುದೆ "ಅಬಲೆ" ಎಂಬ ಅವರ ಹೆಸರಿನಿಂದಲೇ ಅವರು ಆದರಿಸಲ್ಪಡಬೇಕಾದವರಲ್ಲವೇ ! ನಂಬಿದವರನ್ನು ಕೈಬಿಡಬಹುದೇ ? ಇವರ ಗೋಳನ್ನು ಕೇಳುವರಿಲ್ಲವೇ ! "ಅಹಿಂಸಾಪರಮೋಧರ್ಮಃ" ಎನ್ನುವ ವಾಕ್ಯಾರ್ಥ ಹಿಡಿಯೋ ? ಎಂದು ಹಲವು ಬಗೆಯಾಗಿ ಚಿಂತಿಸುತ್ತಿದ್ದ ಸುಂದರೇಶನು ಪರೀಕ್ಷೆಯಲ್ಲಿ ಮೊದಲನೆಯವನಾಗಿ ಪ್ರತಿವರ್ಷವೂ ತೇರ್ಗಡೆ ಹೊಂದುತ್ತಿದ್ದವನು ಆ ವರ್ಷ ತೇರ್ಗಡೆಯಾಗಲಿಲ್ಲ. ಇದಕ್ಕೆ ಯಾರೂ ಆಶ್ಚರ್ಯ ಪಡಲೇ ಇಲ್ಲ. ಏಕೆಂದರೆ ಅದರ ಕಾರಣವು ಸರ್ವರಿಗೂ ತಿಳಿದೇ ಇದ್ದಿತು, ಪರೀಕ್ಷೆಯಲ್ಲಿ ಎರಡನೆಯವನಾಗಿ ತೇರ್ಗಡೆಯಾದರೆ ಆ ಅವಮಾನವನ್ನು ಸಹಿಸಲಾರದವನಾಗಿ ಮನೆಯನ್ನು ಬಿಟ್ಟು ಎಲ್ಲಿಯೂ ಕದಲದಿದ್ದ ಸುಂದರೇಶನು ತಾನು ಈ ವರ್ಷ ತೇರ್ಗಡೆಯಾಗದಿದ್ದಕ್ಕೆ ಸ್ವಲ್ಪವೂ ಚಿಂತಿಸಲಿಲ್ಲ. ದುಃಖಸಾಗರದಲ್ಲಿಯೇ ಮುಳುಗಿರುವವನಿಗೆ ಇದೊಂದು ಲಕ್ಷ್ಯವೇ ? ಆದ್ದರಿಂದ ಪುನಃ ಓದಲಾರಂಭಿಸಿದನು. ಪದೇಪದೇ ಇಂದಿರೆಯನ್ನು ಬೇಕೆಂದು ಮಾತ್ರ ಆಶೆಯಾಗುವುದು. ಆದರೂ ಅವಳನ್ನು ನೋಡಿ ಹೇಗೆ ಸಹಿಸುವನೆಂದು ಯೋಚಿಸುವನು.

ಇನ್ನು ಇಂದಿರೆಯ ಸ್ಥಿತಿಯನ್ನು ವರ್ಣಿಸೋಣ. ಅವಳಿಗೆ ತನ್ನ ಸ್ಥಿತಿಯೇ ಗೊತ್ತಿರಲಿಲ್ಲ. ನಾರಾಯಣನು ಸತ್ತು ಹೋದನೆಂದು ಮಾತ್ರ ಬಲ್ಲಳು. ಅವನಿಗೂ ತನಗೂ ಏರ್ಪಟ್ಟಿರುವ ಸಂಬಂಧವು ಘಾದ್ದರಿಂದಲೂ ಅವನ ಮರಣವು ತನ್ನನ್ನು ಈರೀತಿ ಬಾಧಿಸುವುದೆಂದೂ ಅರಿಯಳು. ಆದರೂ ಮನಸ್ಸಿನಲ್ಲಿಮಾತ್ರ ಒಂದು ಬಗೆಯ ವ್ಯಥೆಯೂ ಸಂಕಟವೂ ಆಗಾಗ್ಗೆ ಬಾಧಿಸುತ್ತಿತ್ತು. ಇದರ ಕಾರಣವು ಅವಳಿಗೆ

ಗೊತ್ತಿಲ್ಲ. ಎಕ್ಕ ವಿಷಯಗಳಲ್ಲೆಲ್ಲಾ ಸಹಜವಾಗಿಯೇ ಇದ್ದಳು. ಆದರ ಮಾತಾಪಿತೃಗಳು ಸದಾ ದುಃಖದಿಂದಿರುವುದನ್ನೂ, ತನ್ನನ್ನು ನೋಡಿ ನೋಡಿ ಕಣ್ಣೀರನ್ನು ಸುರಿಸುವದನ್ನೂ, ತನ್ನನ್ನು ನೋಡಿದ ವರೆಲ್ಲಾ ಮುಖ ತಿರುಗಿಸಿ ಕೊಳ್ಳುವದನ್ನೂ, ಅನೇಕ ಸಲ ನೋಡು ತ್ತಿದ್ದಳು. ಆದ್ದರಿಂದ ಕೆಲವುಸಲ, "ನನ್ನನ್ನು ನೋಡಿ ಇವರೆಲ್ಲಾ ಈ ರೀತಿಯಾಗಿರಲು ಕಾರಣವೇನು" ಎಂದು ಚಿಂತಿಸುವಳು. ಅವ ಳತಾಯಿತಂದೆಗಳು ಏನೂ ತಿಳಿಯದ ಮಗುವಿಗೆ ಅವಳ ಸ್ಥಿತಿಯನ್ನು ಹೇಳಿ ಯಾತಕ್ಕೆ ವ್ಯಥೆಗೊಳಿಸಬೇಕು?" ಎಂದು ಆ ಸಂದರ್ಭವೊದ್ದು ಗಿದಾಗಲೆಲ್ಲಾ ಅವಳಿಗೆ ತಿಳಿಯದಂತೆ ನಡೆಯುತ್ತಿದ್ದರು. ಅವಳಿಗೆ ತಿಳಿಯುವ ಹಾಗೆ ಕಣ್ಣೀರನ್ನೂ ಸುರಿಸರು. ಆದರೂ ಅವಳ ಹುಡು ಗಾಟ ಬುದ್ಧಿಯನ್ನೂ ಪ್ರಪಂಚ ಸುಖದಲ್ಲಿ ಅವಳಿಗಿರುವ ಆಶೆಯನೂ ನೆನೆಸಿಕೊಂಡಾಗಲೆಲ್ಲಾ ಗೋಳಾಡುವರು. ಇಂದಿರೆಯು ಓದುವು ದನ್ನೂ, ವೀಣೆನುಡಿಸುವುದನ್ನೂ, ಹಾಡುವದನ್ನೂ ಕಂಡಾಗಲೆಲ್ಲಾ "ಅಯ್ಯೋ; ಇನ್ನು ಕೆಲವು ದಿನಗಳಲ್ಲಿ ಇವೆಲ್ಲವೂ ಮಾಯವಾಗುವ ದಲ್ಲಾ" ಎಂದು ನಿಟ್ಟುಸಿರು ಬಿಡುವರು. ದಿನದಿನಕ್ಕೆ ಅವಳು ಪೂರ್ಣ ಚಂದ್ರನಂತೆ ಪ್ರವರ್ಧಮಾನಳಾಗುವದನ್ನು ಕಂಡು ಬೆಂಕಿಗೆ ಬಿದ್ದ ಪತಂಗದಂತೆ ತಪಿಸುವರು. ಮೇಲೆ ಹೇಳಿದಂತೆ ದಿನಗಳು ಕಳೆಯುತ್ತಿ ರಲು ಒಂದುದಿನ ಸ್ವರ್ಣಾಳಿಗೂ ಇಂದಿರೆಗೂ ಕೆಳಗೆ ಕಂಡ ಸಂಭಾಷ ಣೆಯು ಜರಗಿತು.

ಇಂದಿರೆ :—ಅಮ್ಮಾ, ನೆನ್ನೆ ಸಾಯಂಕಾಲ ನೀನು ನನಗೆ ಹೂ ಮುಡಿಸಿದ್ದೆಯಲ್ಲವೆ ? ಅದನ್ನು ನೋಡಿ ಪಕ್ಕದ ಮನೆ ಕಮಲೆಯು ಅವಳ ತಾಯಿ ಹತ್ತಿರ ಹೋಗಿ "ಇಂದಿರೆಯು ಹೂ ಮುಡಿದುಕೊಂಡಿ ರುವಳಲ್ಲಾ ಆಗಬಹುದೇ" ಎಂದು ಕೇಳಿದ್ದಕ್ಕೆ ಅವಳ ತಾಯಿಯು, "ಇನ್ನೂ ಸ್ವಲ್ಪದಿನ ಮುಡಿದುಕೊಳ್ಳಬಹುದು" ಎಂದು ಹೇಳಿದಳು. ಅವಳು ಯಾತಕ್ಕೆ ಹಾಗೆ ಹೇಳಿದಳು ? ಎಂದಳು.

ತನ್ನ ಮಗಳ ಈ ರೀತಿಯಾದ ಪ್ರಶ್ನೆಯನ್ನು ಕೇಳಿ ಎದೆಯೊಡ

ದವಳಾಗಿ ಕಣ್ಣೀರು ಸುರಿಸುತ್ತಾ "ಅವಳೇನು ಹೇಳಿದಳು, ಮುಡಿದು ಕೊಳ್ಳಬಹುದೆಂದು ತಾನೇ ಹೇಳಿದಳು" ಎಂದಳು.

ಇಂದಿರೆ :—ಹೌದು. ಆದರೆ, ಇನ್ನೂ ಸ್ವಲ್ಪದಿನ ಮುಡಿದು ಕೊಳ್ಳಬಹುದೆಂದು ಹೇಳಿದಳು. ಅದೇತಕ್ಕೆ ಹಾಗೆ ಹೇಳಿದಳು ?

ಈಗ ಸ್ವರ್ಣಳು ಏನು ಮಾಡಿಯಾಳು ? ಮೊದಲೆ ಹೇಳಿದಂತೆ ಉತ್ತರವಿತ್ತರೆ ಸುಮ್ಮನಾಗುವಳೆಂದು ತಿಳಿದಿದ್ದಳು. ಅವಳೀಇಷ್ಟೊಂದು ಕೇಳಿದ ಮೇಲೆ ಹೇಳಿದ ಹೊರ್ತು ಬಿಡಲಾರಳೆಂದು ಮನಸ್ಸನ್ನು ಬಿಗಿಹಿಡಿದುಕೊಂಡು ಅತಿ ದುಃಖದಿಂದ, "ಇಂದಿರಾ, ಅವಳು ಹೇಳಿದ್ದು ನ್ಯಾಯವೇ ಸರಿ. ಇನ್ನು ಕೊಂಚದಿನಗಳಾದ ಮೇಲೆ ಹೂ ಮುಡಿದುಕೊಳ್ಳ ಕೂಡದು" ಎಂದಳು.

ಇಂದಿರೆ :—ಯಾಕಮ್ಮ ?

ಸ್ವರ್ಣಳು :– ಮಗೂ ! ನಿನ್ನ ಪ್ರಶ್ನೆಗೆ ನಾನೇನುತ್ತರಹೇಳಲಿ! ನಮ್ಮ ನಾರಾಯಣನು ಸತ್ತುಹೋಗಲಿಲ್ಲವೇ ? ಅದಕ್ಕೋಸ್ಕರವಾಗಿಯೇ.

ಇಂದಿರೆ :—ನಾರಾಯಣನು ಮರಣಹೊಂದಿದರೆ ನಾನೇತಕ್ಕೆ ಹೂ ಮುಡಿದುಕೊಳ್ಳ ಕೂಡದು ?

ಸ್ವರ್ಣಳು :—(ನಿಟ್ಟುಸಿರು ಬಿಡುತ್ತಾ) ಅವನು ನಿನ್ನ ಪತಿಯಲ್ಲವೇ ?

ಇಂದಿರೆ :—ಹೌದು, ಅವನು ತಾನೇ ಮರಣಹೊಂದಿದನಲ್ಲಾ, ಇನ್ನು ಅವನ ಮಾತೇಕೆ."

ಸ್ವರ್ಣಳು :—ಅದಕ್ಕಾಗಿಯೇ ನೀನ್ಯಾವ ಅಲಂಕಾರಗಳನ್ನೂ ಮಾಡಿಕೊಳ್ಳಲಾಗದು.

ಇಂದಿರೆ :—ಯಾವ ಹೂವನ್ನೂ ಮುಡಿದುಕೊಳ್ಳಕೂಡದೇ ?

ಸ್ವರ್ಣಳು :—ಅಯ್ಯೋ ! ಕೂಡದು. ನಿನ್ನಿಷ್ಟಕ್ಕೇ ಬಿಡುವರೇ ? " ಎಂದು ಗೋಳಾಡಿದಳು.

ಇಂದಿರೆ :—ಅಮ್ಮಾ! ಇನ್ನೂ ಯಾತಕ್ಕೆ ಅಳುವೆ ? ಅಷ್ಟಕ್ಕೇ ಬಿಡದೆ ಇನ್ನೇನು ಮಾಡುವರು ? ಅದನ್ನೂ ಹೇಳು.

ಸ್ವರ್ಣಳು :—ಅಯ್ಯೋ ! ನಿನ್ನ ತಲೆಯ ಕೂದಲನ್ನೇ ತೆಗೆದು ಬಿಡುವರಲ್ಲಾ, ಎಂದುಗಟ್ಟಿಯಾಗಿ ಗೋಳಾಡಿದಳು. ಇದನ್ನು ನೋಡುತ್ತಿದ್ದ ಇಂದಿರೆಯು ಸ್ವಲ್ಪಹೊತ್ತು ಸ್ತಂಭಿತಳಾಗಿ ನೋಡುತ್ತಿದ್ದು ತರುವಾಯ ಹೊರಟುಹೋದಳು.

ಕೆಲವು ದಿನಗಳು ಕಳೆದ ಮೇಲೆ ಸ್ವರ್ಣಳು ಒಂದು ದಿನ ತಲೆ ಬಾಚಿಕೊಳ್ಳುವುದಕ್ಕೆ ಇಂದಿರೆಯನ್ನು ಕರೆಯಲು, "ಅಮ್ಮಾ, ನನ್ನ ತಲೆಯನ್ನು ಮುಂಡನ ಮಾಡುವರೆಂದು ಅದಿನ ಹೇಳಿದೆಯಲ್ಲವೆ ? ಅದಕ್ಕಿಷ್ಟು ಪೋಷಣೆಯಾತಕ್ಕೆ ? " ಎಂದಳು. ಅದನ್ನು ಕೇಳಿ ಸ್ವರ್ಣಳು "ಅಯ್ಯೋ ! ನಿನ್ನ ಮಾತುಗಳನ್ನು ಕೇಳುವ ನನ್ನ ಪ್ರಾಣಗಳು ಹೋಗದಲ್ಲಾ " ಎಂದು ಅತ್ತಳು.

ಇಂದಿರೆ :—ಯಾಕಮ್ಮಾ, ನಾನಿನ್ನು ಮೇಲೆ ಹೊಸಸೀರೆಉಟ್ಟು ಕೊಳ್ಳಕೂಡದಂತಲ್ಲಾ ! ಬರೀ ಬಿಳೀ ಸೀರೆಯನ್ನುಟ್ಟುಕೊಳ್ಳ ಬೇಕಂತೆ.

ಸ್ವರ್ಣಳು :—ಹೌದಮ್ಮ ! ಅಯ್ಯೋ ! ನಿನಗಿದನ್ನೆಲ್ಲಾ ಹೇಳಿದವರ್ಯಾರು ?

ಇಂದಿರೆ:—ಇನ್ನು ಆಭರಣಗಳನ್ನೂ ಧರಿಸಿಕೊಳ್ಳಕೂಡದಂತೆ! ಹಾಗಾದರೆ ನಾನು ನಮ್ಮ ಅಜ್ಜಿಯಂತಿರಬೇಕೇ? " ಎಂದು ಕೇಳಿದಳು. ಇವಳ ಮಾತುಗಳನ್ನು ಕೇಳಿ ಸಹಿಸದ ಸ್ವರ್ಣಳು ಮೂರ್ಛಿತಳಾಗಿ ಕೆಳಗೆ ಬಿದ್ದುಬಿಟ್ಟಳು. ಅದೇ ಕಾರಣವಾಗಿ ಸಹಿಸಲಾರದ ಮನೋವ್ಯಥೆಯಿಂದ ನರಳಿ ತನ್ನ ಮಗಳ ಭವಿಷ್ಯತ್ ಸುಖದುಃಖಗಳನ್ನು ನೋಡಲಾರದವಳಾಗಿ ಪರಲೋಕವನ್ನು ಹೊಂದಿದಳು.

ಇನ್ನು ಇಂದಿರೆಯು ಏನು ಮಾಡಿಯಾಳು ? ಅಯ್ಯೋ! ಏನೂ ಅರಿಯದ ಬಾಲಪ್ರಾಯದಲ್ಲಿ ತನ್ನೊಡನಾಡಿ ತನ್ನೊಡನೆ ಬೆಳೆದು

ತನ್ನಿಂದ ಪ್ರೀತಿಸಲ್ಪಟ್ಟ ಸುಂದರೇಶನನ್ನು ಬಿಟ್ಟು ಮತ್ತೊಬ್ಬನನ್ನು ಮದುವೆಯಾಗಿ ಅವನನ್ನೂ ಮರಣಾವಸ್ಥೆಯಲ್ಲಿ ಕಂಡು ತನ್ನ ಸ್ಥಿತಿಯನ್ನರಿಯದೆಯೂ, ಪತಿ ಪತ್ನಿಯರೆನ್ನುವ ಭಾವನೆಯನ್ನೇ ಅರಿಯದೆಯೂ, ತನ್ನ ತಾಯಿಯನ್ನು ಅನೇಕ ಪ್ರಶ್ನೆಗಳನ್ನು ಕೇಳಿ ತನ್ನ ಅತ್ತೆಯ ಮಗನಾದ ನಾರಾಯಣನು ಸತ್ತದ್ದಕ್ಕಿಷ್ಟು ಅವಸ್ಥೆಯೇ ಎಂದು ದಿಗ್ಭ್ರಮೆ ಹೊಂದಿದ್ದ ಇಂದಿರೆಗೆ ಮಾತೃವಿಯೋಗವೂ ಒದಗಿದರೆ ಅವಳು ಹೇಗೆ ಸಹಿಸಿಯಾಳು? ಇಂದಿರೆಯಂಥ ಅಬಲೆಯರ ಶೋಚನೀಯ ಸ್ಥಿತಿಯನ್ನು ಕಂಡು ಮರುಗದಿರುವರ್ಯಾರು ? ಪತಿ ಪತ್ನಿಯರ ಸಂಬಂಧವೇ ಇಂತಹದೆಂದರಿಯದೆ ಕೇಳಿದ ಪ್ರಶ್ನೆಗಳಿಂದ ತಾಯಿಯು ಪರಲೋಕವನ್ನು ಹೊಂದಿದಳು. ತಂದೆಯಾದರೋ ದುಃಖಸಾಗರದಲ್ಲ ಮುಳುಗಿದನು. ಇಂಥಾ ದುಃಖವೂ, ಇಂಥಾ ಕಾಠಿಣ್ಯವೂ ಹೆಣ್ಣು ಮಕ್ಕಳನ್ನು ಹೆತ್ತ ಮಾತಾಪಿತೃಗಳಿಗೆ ತಿಳಿಯುವುದೇಹೊರ್ತು ಬೀದೀ ಜಗಲಿಯಮೇಲೆ ಕುಳಿತು ತಾವೇ ಬುದ್ಧಿಶಾಲಿಗಳೆಂದು ಭಾವಿಸಿ ತೀರ್ಮಾನಮಾಡುವವರಿಗೆ ತಿಳಿಯದು. ಇತರರ ಸುಖ ದುಃಖಗಳು ನಮ್ಮನ್ನು ಸೇರಿದವೆಂದು ಭಾವಿಸುವ ಕರುಣಾಮೂರ್ತಿಗಳಲ್ಲದೆ ಇತರರು ತಿಲಮಾತ್ರವೂ ತಿಳಿಯಲಾರರು.

ಈ ದುಃಖ ಸಂಭವವನ್ನು ಕಣ್ಣಾರ ಕಂಡ ಶಚೀಂದ್ರನ ಸ್ಥಿತಿಯನ್ನು ಹೇಳತೀರದು. ಮೊದಲೇ ಸಮಾಜ ಪರಿಷ್ಕರಣ ಸಂಘದಲ್ಲಿ ಸೇರಿದವನು. ಅದರಲ್ಲಿವನು ಸೇರುವುದಕ್ಕೆ ಕಾರಣವೇ ಬಾಲ್ಯವಿಧವೆಯರ ಶೋಚನೀಯ ಸ್ಥಿತಿಯನ್ನು ದೂರಮಾಡುವ ಉದ್ದೇಶದಿಂದ. ಅದರಲ್ಲೂ ತನ್ನಸಹೋದರಿಗೇನೇ ಈಗತಿಪ್ರಾಪ್ತವಾದರೆ ಕೇಳಬೇಕೇ? ಒಂದುಸಲ ದೈವವನ್ನು ನಿಂದಿಸುವನು. ಒಂದುಸಲ ತಂದೆಯನ್ನು ದೂಷಿಸುವನು. ಯಾರಿಗೂ ಕಾಣದಂತೆ ಪುನರ್ವಿವಾಹಮಾಡಿಬಿಡೋಣವೆಂದುನಿಶ್ಚೈಸುವನು. ಜಾತಿಮತಾಚಾರವನ್ನೂ ತನ್ನಮತಿಯನ್ನೂ ನಿಂದಿಸುವನು. ತನ್ನಮಾತನ್ನುಲ್ಲಂಘಿಸಿ ಬಾಲ್ಯವಿವಾಹ ಮಾಡಿದ್ದಕ್ಕಾಗಿ ತಂದೆಯನ್ನು ನಿಂದಿಸುವನು. ಏನು ಮಾಡಿದರೇನು ? ತನ್ನ ಸಹೋದರಿಯನ್ನು ಸುಖಸ್ಥಿತಿಯಲ್ಲಿಡಲಸಮರ್ಥನಾದನು. ಅವಳಿಗೆ

ವಿದ್ಯೆಯನ್ನು ಬೋಧಿಸಿ, ಅದರ ಮೂಲಕವಾಗಿಯಾದರೂ ಅವಳ ದುಃಖ ಶಮನ ಮಾಡಬೇಕೆಂದು ನಿಶ್ಚೈಸಿ, ಅವಳಿಗೆ ತಾನೇ ವಿದ್ಯಾಬೋಧಕನಾಗಿನಿಂತು ತನ್ನಿಂದ ಕೂಡಿದ ಮಟ್ಟಿಗೂ ಅವಳ ದುಃಖ ನಿವಾರಣಕ್ಕೆ ತಕ್ಕ ಪ್ರಯತ್ನಗಳನ್ನು ಮಾಡಿಕೊಂಡಿದ್ದನು.

ಆರನೆಯ ಅಧ್ಯಾಯ ಸಂಪೂರ್ಣಂ.

---

# ಏಳನೆಯ ಅಧ್ಯಾಯ.

---

## ಸ್ವರ್ಣಳ ಮರಣವೂ ಇಂದಿರೆಯ ಕಷ್ಟಪರಂಪರೆಯೂ.

ಇಂದಿರೆಯ ಮಾತುಗಳನ್ನು ಸಹಿಸಲಾರದೆ ಸ್ವರ್ಣಳು ಮೂರ್ಛೆ ಹೊಂದಿದಳೆಂದು ಹಿಂದೆಯೇ ತಿಳಿಸಿದೆಯಷ್ಟೆ. ವೈದ್ಯರು ಬಂದು ನೋಡಿ ರೋಗಿಯು ಬದುಕುವುದು ಅಸಂಭವವೆಂದು ಹೇಳಿಬಿಟ್ಟರು. ಸ್ವರ್ಣಳು ತನ್ನ ಅಂತ್ಯಕಾಲದಲ್ಲಿ ಸುಂದರೇಶನನ್ನು ನೋಡಬೇಕೆಂದು ಅಪೇಕ್ಷಿಸಿದಳು. ಅದರಂತೆಯೇ ಸುಂದರೇಶನೂ ಬಂದನು. ಸ್ವರ್ಣಳು ಸುಂದರೇಶನನ್ನು ನೋಡಿ ತನ್ನ ಇಂದಿರೆಯ ಸ್ಥಿತಿಯನ್ನೂ ತಾನವಳನ್ನು ನಿರ್ಗತಿಕಳಾಗಿ ಬಿಟ್ಟು ಹೋಗುವುದನ್ನೂ ನೆನೆಸಿ ಗಟ್ಟಿಯಾಗಿ ಅತ್ತಳು. ಇಂದಿರೆಯೂ ಕೂಡ ಸುಂದರೇಶನನ್ನು ನೋಡಿ ಕಣ್ಣೀರು ಸುರಿಸಲಾರಂಭಿಸಿದಳು. ಸಾಧಾರಣವಾಗಿ ಬಹಳ ದುಃಖವುಳ್ಳವರು ತಮ್ಮ ಆಪ್ತರನ್ನು ಕಾಣುತ್ತಲೂ ಗಟ್ಟಿಯಾಗಿ ಪ್ರಲಾಪಿಸುವುದು ಪದ್ಧತಿ. ಈ ಪದ್ಧತಿಯನ್ನು ದೊಡ್ಡವರಿಂದ ಮಕ್ಕಳವರೆಗೂ ಕಾಣಬಹುದು. ಇಂದಿರೆಯನ್ನು ಮೊದಲು ನೋಡಿದ ಸುಂದರೇಶನ ದುಃಖವನ್ನು ವರ್ಣಿಸಲಾರಿಂದ ಸಾಧ್ಯ? ಸ್ವಲ್ಪ ಹೊತ್ತಿನಮೇಲೆ ಅವರವರೇ ಅತ್ತು ಶಾಂತರಾದರು. ಸ್ವರ್ಣಳು ಸ್ವಲ್ಪಹೊತ್ತು ಸುಮ್ಮನಿದ್ದು ಸುಂದರೇಶನ ಕೈಗಳನ್ನು ಕಣ್ಣೀರಿನಿಂದ ತೋಯಿಸಿ ದುಃಖವನ್ನಡಗಿಸಿಕೊಂಡು "ವತ್ಸಾ! ನನ್ನ ಬಾಳು ಈ ರೀತಿಯಾಯಿತು. ನಾನೆಣಿಸಿ

ದಂತೆ ನಿನಗೇ ಇಂದಿರೆಯನ್ನು ವಿವಾಹ ಮಾಡಿದ್ದರೆ ಇಂದಿರೆಗೆ ಈ ಗತಿಯುಂಟಾಗುತ್ತಿರಲಿಲ್ಲ. ನಾನೂ ಇಷ್ಟು ಬೇಗ ಇಹಲೋಕ ವ್ಯಾಪಾರವನ್ನು ತ್ಯಜಿಸುತ್ತಿರಲಿಲ್ಲ. ನಮ್ಮತ್ತೆಯ ಹಠದಿಂದ ಈ ರೀತಿ ಯಾಯಿತು. ಆದರೂ ಅತ್ತೆಯನ್ನು ಹೇಳುವುದರಲ್ಲೇನು ಪ್ರಯೋಜನ ? ಅವರೇ ಸ್ಥಿತಿಯನ್ನು ಕಾಣದೆ ಹೋದರು. ನಮ್ಮ ಕಷ್ಟಕಾಲಕ್ಕೆ ಇತರರನ್ನೇಕೆ ದೂಷಿಸಬೇಕು ? ಆದರೂ ನನ್ನ ಕುಮಾರಿಯು ನಿರ್ಗತಿಕಳಾದಳು. ಅಯ್ಯೋ ! ಸುಂದರೇಶಾ ! ನನ್ನ ಹೆತ್ತ ಹೊಟ್ಟೆಯು ಉರಿಯುತ್ತಿರುವದು. ಇವಳು ಹುಟ್ಟದೆಯೇ ಇರಕೂಡದೇ ? ನನ್ನ ಮುದ್ದು ಮಗುವು ಎಲ್ಲರಿಂದಲೂ ನಿಂದಿಸಲ್ಪಡುವ ಈ ಗತಿಯನ್ನು ಹೊಂದಿದ್ದಲ್ಲದೆ ನನ್ನನ್ನೂ ಕಳೆದುಕೊಂಡು ಏನುಮಾಡಿಯಾಳು ? ಹ್ಯಾಗೂ ನೀನು ವಿವೇಕಶಾಲಿ, ಮುಂದೆ ಅಭಿವೃದ್ಧಿಗೆ ಬರತಕ್ಕವನು. ಇಂದಿರೆಯಲ್ಲಿ ವಿಶ್ವಾಸವುಳ್ಳವನು. ಆದ್ದರಿಂದ ಯಾರು ಕೈಬಿಟ್ಟರೂ ಸರಿ, ನೀನು ಮಾತ್ರ ಅವಳನ್ನು ಕೈಬಿಡದೆಯೂ, ಅವಳು ವ್ಯಥೆ ಪಡದೆಯೂ ಇರುವಂತೆ ಕಾಪಾಡುವುದಾಗಿ ಪ್ರತಿಜ್ಞೆಮಾಡಿದರೆ ನಾನು ಸಂತೋಷದಿಂದ ಪ್ರಾಣವನ್ನು ಬಿಡುವೆನು " ಎಂದಳು.

ಇವಳು ಮಾತನಾಡುತ್ತಿರುವಾಗಲೇ ಧಾರೆಯಾಗಿ ಕಣ್ಣೀರು ಸುರಿಸುತ್ತಿದ್ದ ಸುಂದರೇಶನು ಇವಳ ಮಾತನ್ನು ಕೇಳಿ ಮತ್ತಿಷ್ಟು ದುಃಖಿತನಾಗಿ "ಅತ್ತೇ ! ನಿನ್ನ ಮಾತಿನಂತೆಯೇ ನಡೆಸುವೆನೆಂದು ಶಪಥಮಾಡುವೆನು. ನೀನು ಕಾತರಳಾಗಬೇಡ" ಎಂದನು.

ಸ್ವರ್ಣಳು :—ವತ್ಸಾ ! ಇನ್ನು ಮೇಲೆ ನನಗೆ ವಿಚಾರವಿಲ್ಲ. ನಿನ್ನನ್ನೂ ನೋಡಿಯಾಯಿತು. ಇಂದಿರೆಗೂ ತಕ್ಕ ಏರ್ಪಾಡು ಮಾಡಿದ್ದಾಯಿತು. ಶಚೀಂದ್ರನಿಗೂ ಹೇಳಿರುವೆನು. ನೀನೂ ಅವನೂ ಮಾತ್ರ ಒಬ್ಬರಿಗೊಬ್ಬರು ಆಧಾರವಾಗಿರಬೇಕು. ಇನ್ನು ಶಚೀಂದ್ರನೂ ದಿಕ್ಕಿಲ್ಲದವನಾಗುವನು. ನಿಮ್ಮ ಸೋದರ ಮಾವನವರಿಗೆ ಸಾವಿರಾರು ಜನರು ಹೆಣ್ಣು ಕೊಡಲು ಸಿದ್ಧರಾಗಿರುವರು. ಹ್ಯಾಗೂ ಅನ್ಯಳು ಅನ್ಯಳು ತಾನೇ. ಆದ್ದರಿಂದ ನೀವಿಬ್ಬರೂ ಒಬ್ಬರನ್ನೊಬ್ಬರು ಅಗಲದೆ ಇರಬೇಕು. ನೀನು ಓದಿದ ಮೇಲೆ ಯಾವ ಊರಿನಲ್ಲಿ ಕೆಲಸ

ಮಾಡಿಕೊಳ್ಳುವೆಯೋ ಆ ಊರಿನಲ್ಲಿಯೇ ಶಚೀಂದ್ರನಿಗೂ ಒಂದು ಕೆಲಸಮಾಡಿಕೊಟ್ಟು ಒಬ್ಬರಿಗೊಬ್ಬರು ಸಹಾಯಕರಾಗಿರಿ. ಎಲ್ಲಾ ತಿಳಿದ ನಿನಗೆ ನಾನು ಹೇಳಬೇಕಾದದ್ದೇನೂ ಇಲ್ಲ;" ಎಂದು ಹೇಳಿ ಸ್ವಲ್ಪಹೊತ್ತು ಸುಮ್ಮನಿದ್ದು ಪುನಃ "ಇನ್ನು ನಾನು ಧೈರ್ಯವಾಗಿ ಪ್ರಾಣಬಿಡುವೆನು. ನನ್ನ ಪತ್ನಿಯ ಕೂದಲನ್ನು ತೆಗೆದು ಅವಳಿಗೆ ವಿಕಾರ ರೂಪವನ್ನುಂಟುಮಾಡುವುದಕ್ಕೆ ಮುಂಚೆ ಸಾಯುವೆನಲ್ಲಾ. ಆ ವಿಷಯದಲ್ಲೇನೋ ಸಂತೋಷವೇ. ಭಗವಂತನು ನಿಮ್ಮನ್ನು ಕಾಪಾಡಲಿ" ಎಂದು ಹೇಳುತ್ತಿರುವಾಗಲೇ ಶ್ವಾಸವು ಏಳಿಯಲಾರಂಭಿಸಿ, ಸ್ವಲ್ಪ ಹೊತ್ತಿನಲ್ಲೇ ಸ್ವರ್ಣಳು ಇಹಲೋಕ ವ್ಯಾಪಾರವನ್ನು ತ್ಯಜಿಸಿದಳು. ಅಲ್ಲಿದ್ದವರೆಲ್ಲಾ ಭ್ರಮಿಸಿ ಪರವಶರಾದರು. ಸ್ವರ್ಣಳಿಗೆ ಸುಂದರೇಶನ ಮೇಲಿದ್ದ ಅಭಿಮಾನವನ್ನು ಕಂಡು ಆಶ್ಚರ್ಯಪಟ್ಟರು. ಇಂದಿರೆಯು ತನ್ನ ವಿಷಯವಾಗಿ ತನ್ನ ತಾಯಿಯು ಸುಂದರೇಶನೊಂದಿಗೆ ಹೇಳಿದ್ದನ್ನೆಲ್ಲಾ ಕೇಳಿದವಳಾದ್ದರಿಂದ ತನ್ನಲ್ಲಿ ತನ್ನ ತಾಯಿಗಿರುವ ವಾತ್ಸಲ್ಯವನ್ನೂ ಅವಳ ಮರಣಾನಂತರ ತಾನಿರಬೇಕಾದ ಭವಿಷ್ಯತ್ ಸ್ಥಿತಿಯನ್ನೂ, ತನ್ನನ್ನು ರಕ್ಷಿಸತಕ್ಕವನು ಸುಂದರೇಶನೇ ಎಂದು ತಾಯಿಯು ಹೇಳಿದ್ದನ್ನೂ ನೆನೆಸಿ ತಾಯಿಯ ಶವದಮೇಲೆ ಬಿದ್ದು ಗೋಳಿಡಲಾರಂಭಿಸಿದಳು. ಇಂದಿರೆಯ ಗೋಳನ್ನು ನೋಡಿ ಆ ಊರಿನವರೆಲ್ಲಾ ಪರಿತಪಿಸಲಾರಂಭಿಸಿದರು.

ಈ ರೀತಿಯಾಗಿ ಗತಿಸಿದ ಸ್ವರ್ಣಳ ಶ್ರಾದ್ಧ ಕ್ರಿಯೆಗಳನ್ನು ಶಚೀಂದ್ರನು ಬಹು ದುಃಖದಿಂದಲೂ ಭಕ್ತಿಯಿಂದಲೂ ನೆರವೇರಿಸಿದನು. ಬಂದಿದ್ದವರೆಲ್ಲಾ ತಮ್ಮ ತಮ್ಮ ಊರಿಗೆ ಹೋದರು. ಸುಂದರೇಶನು ಮಾತ್ರ ಇನ್ನೂ ಸ್ವಲ್ಪದಿನಗಳಿದ್ದನು. ಮನೆಯಲ್ಲಿ ಹೆಂಗಸರ ಸಹಾಯವಿಲ್ಲದ್ದರಿಂದ ಶಚೀಂದ್ರನ ಹೆಂಡತಿಯನ್ನು ಕರೆದುಕೊಂಡು ಬಂದು ಇಂದಿರೆಗೆ ಜೊತೆಯಾಗಿಟ್ಟರು. ಹೀಗೆಷ್ಟು ದಿನ ಇರಲಾದೀತು ? ಚಿರ ಕಾಲವೂ ಅತಿ ಜಾಗ್ರತೆಯಾಗಿ ಕಾಪಾಡಬೇಕಾಗಿದ್ದ ಇಂದಿರೆ ಇರುವಳು ಇವಳ ಯೌವ್ವನವನ್ನೂ ರೂಪವನ್ನೂ ಯೋಚಿಸದರೆ, ಯಾರಾದರೊಬ್ಬರು ಇವಳ ಜೊತೆಗಿರುವುದು ಅತ್ಯಾವಶ್ಯಕವಾಗಿದ್ದಿತು. ಜನರ

ಬಾಯನ್ನು ಮುಚ್ಚುವುದು ಅಸಾಧ್ಯವಲ್ಲವೇ ! ಸತೀಶನೋ ಪುರುಷನು. ಅವನೇನು ಮಾಡಿಯಾನು ! ಮನೆಯಲ್ಲಿರುವ ಸಾಮಾನನ್ನು ಭದ್ರಪಡಿಸಿಯಾನೇ ? ಇಂದಿರೆಯನ್ನು ನೋಡಿಕೊಂಡಾನೇ ? ಆದ್ದರಿಂದ ಮನೆಯಲ್ಲಿದ್ದು ಸಂಸಾರ ಮಾಡತಕ್ಕ ವನಿತೆಯೊಬ್ಬಳಿರಬೇಕೆಂದು ನಿಶ್ಚೈಸಿ, ಶ್ರಾದ್ಧ ಮುಗಿದ ದಿವಸಗಳಿಂದ ರಾಶಿರಾಶಿಯಾಗಿ ಬರತಕ್ಕ ಹೆಣ್ಣುಗಳ ಜಾತಕಗಳನ್ನು ನೋಡಲಾರಂಭಿಸಿದನು. ಈ ಸಂಗತಿಯನ್ನರಿತ ಶಚೀಂದ್ರನು ತನ್ನಲ್ಲಿ ತಾನೇ ಚಿಂತಿಸಲಾರಂಭಿಸಿದನು. ಸತೀಶನಿಗೋ 45 ವರ್ಷ ವಯಸ್ಸಾಗಿರುವುದು. ಈಗವಿವಾಹವಾಗಬೇಕೆಂಬುದು ಅಷ್ಟಾಗಿಉಚಿತವಾಗಿ ತೋರುವುದಿಲ್ಲ. ತಾನು ಸಮಾಜಪರಿಷ್ಕರಣ ಸಂಘಕ್ಕೆ ಸೇರಿದವನಾದದ್ದರಿಂದ ಇವನಿಗೆ ರುಚಿಸಲಿಲ್ಲ. ಆದರೂ ತಂದೆಗೆ ಹ್ಯಾಗೆ ಬುದ್ಧಿ ಹೇಳುವುದು ! ಆದರೂ ಭಗವಂತನು ತಂದೆಯ ಹೃದಯದಿಂದ ಈ ದುರಾಶೆಯನ್ನು ತಪ್ಪಿಸಬಾರದೇ ! " ಎಂದು ಪ್ರಾರ್ಥಿಸುವನು. ಸತೀಶನಾದರೋ ನೋಡಿದ ಜಾತಕಗಳಲ್ಲಿ 14 ವರ್ಷ ವಯಸ್ಸುಳ್ಳ ಹೆಣ್ಣನ್ನು ವಿವಾಹವಾಡಿಕೊಳ್ಳುವುದಾಗಿ ನಿಶ್ಚೈಸಿ ಲಗ್ನವನ್ನೂ ನಿಶ್ಚೈಸಿಬಿಟ್ಟನು.

ಶಚೀಂದ್ರನು ಏನು ಮಾಡಿಯಾನು ? "ಅಯ್ಯೋ, ಸಂಘಸಂಸ್ಕರಣವವರ ಉದ್ದೇಶಗಳೇನಾದವು. ನಾನು ಯಾವ ಯಾವವಿಷಯಗಳನ್ನು ಕೂಡದೆಂದು ತಡವಿದ್ದೆನೋ ಅವುಗಳೆಲ್ಲಾ ನನ್ನ ಮನೆಯಲ್ಲಿಯೇ ನಡೆದುವು. ಏನು ಮಾಡಲಿ ? ನನ್ನ ಸಹೋದರಿಗೆ ಅವಳೊಪ್ಪವಿದ್ದ ವರನನ್ನು ಕೊಟ್ಟು ಬಾಲ್ಯ ವಿವಾಹವಾಯಿತು. ಅವಳೇ ಈಗ ಬಾಲ್ಯ ವಿಧವೆಯಾಗಿರುವಳು. ನನ್ನ ತಂದೆಯಾದರೋ 45 ನೇ ವರ್ಷದಲ್ಲಿ ಪುನರ್ವಿವಾಹಿತನಾಗಬೇಕೆಂದಿರುವನು. ಆಹಾ ಸಮಾಜ ಪರಿಷ್ಕರಣಸಂಘದವರ ಉದ್ದೇಶಗಳೆಲ್ಲಾ ನನ್ನಲ್ಲೇ ಸಾರ್ಥಕವಾದವು" ಎಂದು ಚಿಂತಿಸಿ, ಚಿಂತಿಸಿ ಸಾಕಾದನು. ಮತ್ತೊಂದು ಸಲ, ಆಹಾ ! ಪುರುಷರ ಕಾಠಿಣ್ಯವೆಂತಹುದು ? ಪುರುಷನಸ್ತ್ರೀ ಸ್ತ್ರೀಗಿ ಅರಿಯದ ಕೇವಲಬಾಲೆಯರಾದ ಅಬಲೆಯರು ಪತಿವಿಯೋಗ ಹೊಂದಿ ಪರ ಮತ್ತೊಬ್ಬನನ್ನು ವರಿಸಕೂಡದಂತೆ. ಜೀವಿತ ಕಾಲವನ್ನೆಲ್ಲಾ

ಚಿಂತಿಸಿ ಕಂಡ ಕಂಡವರಿಂದ ತಿರಸ್ಕರಿಸಲ್ಪಟ್ಟು ಕಾಲವನ್ನು ಕಳೆಯ ಬೇಕಂತೆ. ಏತಕ್ಕಾಗಿ ಹೀಗಿರಬೇಕು ? ಸ್ವಾರ್ಥವನ್ನುದ್ದೇಶಿಸಿ ಮತಿ ಹೀನತೆಯಿಂದಲೂ, ಪರವಿಶ್ವಾಸದಿಂದಲೂ ಯಾವುದನ್ನೂ ಲಕ್ಷ್ಯ ಮಾಡದೆ ಪುರುಷನ ದೇಹಸೌಖ್ಯವನ್ನೂ ಸ್ತ್ರೀಯ ಸಮ್ಮತವನ್ನೂ ಲೆಕ್ಕಿಸದೆ ಮಾರಿಗೆ ಬಲಿಕೊಡಲು ಕನ್ಯೆಯನ್ನರ್ಪಿಸುವಂತೆ ಎಲ್ಲರತೃಪ್ತಿ ಗಾಗಿ ಅಬಲೆಯರನ್ನು ಗುರಿಮಾಡಿ ನಾಲ್ಕು ದಿನಗಳು ಸ್ವಪ್ನದಂ ತೆಯೂ ಹುಡುಗರ ಜೊಂಬೆಯಾಟದಂತೆಯೂ, ಪುಷ್ಪಹಾರಗಳನ್ನು ಧರಿಸಿಕೊಂಡು ಸಭಾ ಮಧ್ಯದಲ್ಲಿ ಕುಳಿತಿದ್ದಕ್ಕೆ ಈ ಶಿಕ್ಷೆಯಂತೆ. ಮತ್ತು ತನ್ನ ಯೌವನಕಾಲದಲ್ಲಿ ವಿವಾಹಿತನಾಗಿ ಸುಖವನ್ನನುಭವಿಸಿ ಮಕ್ಕಳನ್ನು ಪಡೆದು ಇರತಕ್ಕ ಪುರುಷನೋರ್ವನು ತನ್ನ ವಯೋಧಿಕ ಕಾಲದಲ್ಲಿ ವಿಧುರನಾದರೆ ಅವನುಮಾತ್ರ ಬಾಲಪ್ರಾಯದ ಕನ್ಯೆಯನ್ನು ವರಿಸಬಹುದಂತೆ ! ಏನನ್ಯಾಯ ? ವೃದ್ಧಕಾಲದ ಆದರಣೆಗೋಸ್ಕರ ವಿವಾಹವಾಗುವ ಪುರುಷರು ಜೀವಿತ ಕಾಲವೆಲ್ಲಾ ಆದರವಿಲ್ಲದೆ ತಪಿಸುತ್ತಿರುವ ಅಬಲೆಯರ ವಿಷಯವನ್ನು ಏತಕ್ಕೆ ಯೋಚಿಸಕೂಡದು ? ಈ ವಿಧಿಯನ್ನು ಸಹಿಸುವರಾರು ? ಎಲ್ಲಾ ವಿಧಿಯ ವಿಚಿತ್ರ ” ಎಂದು ಪ್ರಲಾಪಿಸುವನು. ಶಚೀಂದ್ರನು ಎಷ್ಟು ತಡೆದರೂ ಸತೀಶನ ವಿವಾಹವು ನಡೆದೇಹೋಯಿತು. ಸ್ವರ್ಣಾಳ ಜ್ಯೋತಿಷ್ಯವೂ ಫಲಿಸಿತು. ವಿವಾಹವಾಗುತ್ತಲೂ ಪತ್ನಿಯನ್ನು ಸತೀಶನು ಮನೆಗೆ ಕರೆದುಕೊಂಡು ಬಂದುಬಿಟ್ಟನು. ಆ ಹುಡುಗಿಗೆ ತಂದೆಯಿರಲಿಲ್ಲ. ವಿಧವೆಯಾದ ತಾಯೊಬ್ಬಳು ಮಾತ್ರವೇ ಇದ್ದದ್ದರಿಂದ ಮಗಳ ಜೊತೆಯಲ್ಲಿ ಅವಳೂ ಬಂದು ಬಿಟ್ಟಳು. ಸತೀಶನು ಎಣಿಸಿದಂತೆ ಮನೆಗೆ ತಕ್ಕ ಹೆಂಗಸರೇ ಬಂದುಬಿಟ್ಟರು. ಶಚೀಂದ್ರನು ಅಲ್ಲಿರಲಿಷ್ಟವಿಲ್ಲದೆ ತನ್ನ ಪತ್ನಿಯನ್ನೂ ಕರೆದುಕೊಂಡು ಮದ್ರಾಸಿಗೆ ಹೊರಟು ಹೋದನು. ಅಲ್ಲಿ ತಕ್ಕ ಉದ್ಯೋಗಕ್ಕೆ ಸೇರಿ ಸುಖವಾಗಿ ಕಾಲಕ್ಷೇಪಮಾಡುತ್ತಿದ್ದನು. ಇಂದಿರೆಯನ್ನು ಜೊತೆಯಲ್ಲಿ ಕರೆದುಕೊಂಡು ಹೋಗಬೇಕೆಂದು ಇವನಿಗೆ ಬಹು ಆಸೆಯಿತ್ತು. ಆದರೂ ಈ ಕಾಲದಲ್ಲಿ ಅವಳನ್ನು ಒಂಟಿಯಾಗಿ ಕಳುಹಿಸಕೂಡದೆಂದೂ ಹೆಂಗಸರಿರುವಕಡೆ ಇರಬೇಕೆಂದೂ ಸತೀಶನು ಹೇಳಿದ್ದರಿಂದ ಇವನೂ ಒಪ್ಪಬೇಕಾಯಿತು. ಸತೀಶನು ಹೇಳಿ

ದಂತೆಯೇ ಶಚೀಂದ್ರನು ಹೋದ ನಾಲ್ಕು ದಿನಗಳಿಗೆಲ್ಲಾ ಇಂದಿರೆಯು ಪುಷ್ಪವತಿಯಾದಳು. ತಕ್ಕ ಸ್ಥಿತಿಯುಲ್ಲದ್ದರೆ ಈ ಸಂದರ್ಭವು ಹೀಗೆ ಗುಟ್ಟಾಗಿರುತ್ತಿತ್ತೆ ! ಇದೂ ಈಶ್ವರೇಚ್ಛೆ.

ಈ ಮಧ್ಯದಲ್ಲಿ ಸುಂದರೇಶನೂ ನ್ಯಾಯಪರೀಕ್ಷೆಯಲ್ಲುತ್ತೀರ್ಣನಾದನು. ತಾನಿರುವ ಊರಿನಲ್ಲಿರಲಿಷ್ಟವಿಲ್ಲದೆ ಶಚೀಂದ್ರನಿರುವ ಮದರಾಸಿನಲ್ಲಿಯೇ ನ್ಯಾಯಾಧೀಶನಾಗಿರಬೇಕೆಂದಪೇಕ್ಷಿಸಿ ಚಿಕ್ಕಪ್ಪನನ್ನು ಕೇಳಲು, ಅವನೂ ಸಮ್ಮತಿಸಿ ಸುಂದರೇಶನನ್ನೂ ಅವನ ಪತ್ನಿಯನ್ನೂ ಕಳುಹಿಸಿಕೊಟ್ಟನು. ಸುಂದರೇಶನೂ ಮದರಾಸಿಗೆ ಹೋಗಿ ಸ್ವರ್ಣೆಯು ಅಂತ್ಯಕಾಲದಲ್ಲಿ ಹೇಳಿದ್ದಂತೆ ಶಚೀಂದ್ರನ ಜೊತೆಯಲ್ಲಿಯೇ ಇರಲಾರಂಭಿಸಿದನು.

ಇವರೀ ರೀತಿಯಾಗಿರುವ ವೇಳೆಯಲ್ಲಿ ಸತೀಶನ ನೂತನ ಗೃಹಕೃತ್ಯವೆಂತಿರುವುದೂ ಅದನ್ನು ಸ್ವಲ್ಪ ವಿವರಿಸೋಣ. ವಿವಾಹವಾದ ಎರಡು ತಿಂಗಳುಗಳಿಗೆಲ್ಲಾ ತಿಕಸ್ಮಿಕೆಯು ಪ್ರಾಪ್ತವಯಸ್ಕಳಾದ್ದರಿಂದ ಕೂಡಲೇ ನಿಷೇಕಪ್ರಸ್ತವೂ ಜರಗಿತು. ನಿಷೇಕ ಪ್ರಸ್ತಕ್ಕೆ ಶಚೀಂದ್ರನೂ ಸುಂದರೇಶನೂ ಬಂದಿದ್ದರು. ಇದರ ಮೇಲೆ ಸತೀಶನ ಪತ್ನಿಯಾದ ಲೀಲೆಯೂ ಅವಳ ತಾಯಿಯಾದ ಶಂಕರಿಯೂ ಮಾಡುತ್ತಿದ್ದ ಅಧಿಕಾರಕ್ಕೆ ಎಲ್ಲೆಯಿರಲಿಲ್ಲ. ಅವರ ಜನ್ಮದಲ್ಲಿಯೇ ಸೇವಕರನ್ನಿಟ್ಟು ಕೆಲಸಮಾಡಿಸಿಕೊಂಡರಿಯದವರಾದ್ದರಿಂದ ಸೇವಕರಮೇಲೆ ಮನಸ್ವಿ ಅಧಿಕಾರ ಮಾಡುತ್ತಲೂ, ಸಿಕ್ಕಿದ ಕೆಲಸಗಳನ್ನೆಲ್ಲಾ ಹೇಳುತ್ತಲೂ ಇದ್ದರು. ಸೇವಕರು ಸದಾ ಸ್ವರ್ಣೆಯ ಸದ್ಗುಣಗಳನ್ನು ಹೋಲಿಸುತ್ತ ಶಂಕರಿ ಇವರ ಕಾಠಿಣ್ಯವನ್ನು ಕುರಿತು ಸದಾ ಮಾತನಾಡಿಕೊಳ್ಳುತ್ತಿದ್ದರು. ಇದನ್ನೆಲ್ಲಾ ಸತೀಶನು ಅರಿತಿದ್ದರೂ ತಿಳಿಯದವನಂತೆಯೇ ಇದ್ದನು. ಇವರಾಡಿದ್ದೇ ಆಟ. ಬೀದಿ ಬಾಗಿಲಿಗೆ ಬಂದು ನಿಂತು ಸೇವಕರೊಂದಿಗೆ ಹರಟೆ ಹೊಡೆಯುವಳು. ಇವಳು ಮಾತನಾಡಿ ಮುಗಿಯುವವರೆಗೂ ಸೇವಕರು ನಿಂತೇ ಇರಬೇಕು. ಶಂಕರಿಯು ಶಿವಾಲಯಕ್ಕೆ ಹೋದರೆ ಡವಾಲಿ ಹಾಕಿರುವ ಸೇವಕನೊಬ್ಬನು ಜೊತೆಗೆ ಬರಬೇಕು. ಲೀಲೆಯು ಬಾವಿಗೆ ಸ್ನಾನಕ್ಕೆ ಹೋದರೆ ದ್ರ

ಚೊಂಬನ್ನು ಕೈಯಲ್ಲಿ ಹಿಡಿದು ಸೇವಕನೊಬ್ಬನು ಕೂಡ ಹೋಗಬೇಕು. ಹೀಗೆ ಹೋಗುತ್ತಿರುವಾಗ ಜನರು ತನ್ನ ವಿಷಯದಲ್ಲೇನು ಹೇಳಿಕೊಳ್ಳುವರೆಂಬುದನ್ನು ತಿಳಿದು ಕೊಳ್ಳಲು ನಾನಾದಿಕ್ಕಿನಲ್ಲಿಯೂ ನೋಡುತ್ತ ಹೋಗುವಳು. ಡೆಪ್ಯುಟೀಕಲೆಕ್ಟರ್ ಉದ್ಯೋಗವು ಸತೀಶನಿಗೆ ಸೇರಿದ್ದೋ ಅಥವಾ ಲೀಲೆಗೆ ಸೇರಿದ್ದೋ ಎಂದು ಆ ಊರಿನವರೆಲ್ಲಾ ಹಾಸ್ಯಮಾಡುವರು. ಸತೀಶನು ಅತ್ತೆ ಮತ್ತು ಪತ್ನಿಯರ ವಶನಾಗಿದ್ದನು. ಡೆಪ್ಯುಟೀ ಕಲೆಕ್ಟರ್ ಉದ್ಯೋಗದಲ್ಲಿ ಸತೀಶನಂತೆ ಹೆಸರು ಪಡೆದವರ್‍ಯಾರು ಇಲ್ಲ. ಅಂಥವನು ಶಂಕರಿ ಮತ್ತು ಲೀಲೆಯ ಒಳಿ ಬೋನಿಗೆ ಬಿದ್ದ ಹುಲಿಯಂತಾದನು. ಮುಂಚಿನಂತೆ ಕಾಲಕ್ಕೆ ಸರಿಯಾಗಿ ಕಛೇರಿಗೆ ಹೋಗಿ ಕೇಸುಗಳನ್ನು ವಿಚಾರಿಸಲಸಮರ್ಥನಾದನು. ಲೀಲೆಯ ದಯದಿಂದ ಹನ್ನೆರಡು ಘಂಟೆಗೆ ಭೋಜನವು ಸಿದ್ಧವಾಗುವುದು. ಸ್ವಲ್ಪ ಅವಸರ ಪಟ್ಟರೆ ಸತೀಶನಿಗೆ ಆದಿನ ಏಕಾದಶಿಯೇ ಸರಿ. ಒಂದು ಘಂಟೆಗೆ ಕಛೇರಿಗೆ ಹೋಗಿ ನಾಲ್ಕುಘಂಟೆಗೆಲ್ಲಾ ಮನೆಗೆ ಬರದಿದ್ದರೆ ತನ್ನಮೇಲೆ ಗಂಡನಿಗೆ ಪ್ರೀತಿಯಿಲ್ಲವೆಂದು ಕುಣಿದಾಡುವಳು. ಸತೀಶನು ಏನು ಮಾಡಿಯಾನು ? ಹನ್ನೆರಡು ಘಂಟೆಗೆ ಹೋಗಿ ನಾಲ್ಕುಘಂಟೆಗೆ ಬರಲು ಹೈಕೋರ್ಟ್ ಜಡ್ಜಿಯೇ? ಡೆಪ್ಯುಟೀಕಲೆಕ್ಟರು. ಬೆಳಿಗ್ಗೆ ಮನೆಯಲ್ಲೂ ಹನ್ನೆರಡು ಘಂಟೆಯಿಂದ ರಾತ್ರಿ ಎಂಟುಘಂಟೆಯವರೆಗೂ ಕಛೇರಿಯಲ್ಲೂ ಕೆಲಸ ಮಾಡಿದರೂ ತೀರುವ ಹಾಗಿಲ್ಲ. ಕೆಲಸವೇನೋ ಚುರ್ತಾಗಿ ಮುಗಿಯಬೇಕಾದ್ದರಿಂದ ಗುಮಾಸ್ತರುಗಳನ್ನು ನಂಬಿ ಅವರ ಮೇಲೆ ಕೆಲಸವನ್ನು ಬಿಡಬೇಕಾಯಿತು. ಅವರು ತಂದ ಕಾಗದಕ್ಕೆ ಕೈ ಬರಹವನ್ನು ಮಾತ್ರ ಹಾಕಿ ಕಳುಹಿಸುತ್ತಿದ್ದನು. ತನ್ನ ಕೆಲಸದಲ್ಲಿ ತನಗೇ ತೃಪ್ತಿಯಿಲ್ಲದ ಮೇಲೆ ಯಾವವೇಳೆಯಲ್ಲಿ ತಲೆಗೇನು ಬರುವದೋ ಎಂದು ಚಿಂತಿಸುತ್ತಲೇ ಇದ್ದನು. ಈ ರೀತಿಯಾದ ಚಿಂತೆಗೆ ಕಾರಣವೇನು ? ಒಬ್ಬೊಬ್ಬರೊಂದೊಂದು ರೀತಿಯಾಗಿ ಹೇಳಿಕೊಳ್ಳುತ್ತಿದ್ದರು. ಕೆಲವರು ಸತೀಶನಿಗೆ ಮದ್ದನ್ನಿಟ್ಟಿರುವರೆನ್ನುವರು. ಕೆಲವರು ಇದೆಲ್ಲಾ ಸ್ವರ್ಣಾಳು ಹೋದದ್ದರಿಂದೆನ್ನುವರು. ಸತೀಶನಿಗೆ ಇಷ್ಟಕ್ಕೇ ತೀರಲಿಲ್ಲ. ಸಂಬಳ ತರುವದು ತಡ, ಅದನ್ನು ಖರ್ಚುಮಾಡುವದು

ಅಮ್ಮನವರ ಭಾರ. ನಮ್ಮಕ್ಕೊಂದು ಕಾಸು ಬೇಕಾದರೂ, ಬಟ್ಟೆಬರೆಯನ್ನು ಕೊಂಡು ಕೊಳ್ಳಬೇಕಾದರೂ ಅಮ್ಮನವರ ಕಟಾಕ್ಷವನ್ನಿದಿರು ನೋಡಬೇಕು. ಇವನ ಗತಿಯೇ ಈ ರೀತಿಯಾಗಿರುವಲ್ಲಿ ಶಚೀಂದ್ರನಿಗೆಲ್ಲಿಂದ ಹಣ ಕಳುಹಿಸಿಯಾನು. ಮೊದಲೆರಡು ಮೂರು ತಿಂಗಳುಗಳು ಹದಿನೈದನೇ ತಾರೀಖು ಹಣ ಬಂತು. ಆ ಮೇಲೆ ಎರಡು ತಿಂಗಳು ನಿಂತ ತರುವಾಯ ಹಣ ಬಂದಿತು. ತರುವಾಯ "ಇನ್ನು ನಿನಗೆ ಸಹಾಯ ಮಾಡಲು ನನ್ನಿಂದಸಾಧ್ಯ, ನಿನ್ನ ಪಾಡನ್ನು ನೀನೇ ನೋಡಿಕೋ. ನನಗೆ ಸಂಸಾರವಿಲ್ಲವೇ" ಎಂದು ಬರೆದನು. ಶಚೀಂದ್ರನು ಎರಡು ಮೂರು ಸಲ ತಂದೆಯ ಮನೆಗೆ ಬಂದಿದ್ದಾಗ ಚಿಕ್ಕಮ್ಮನ ಕಾರ್ಪಣ್ಯವನ್ನೂ ತಂದೆಯ ಪರಿತಾಪ ಸ್ಥಿತಿಯನ್ನೂ ನೋಡಿದ್ದನಾದ್ದರಿಂದ ಮುಪ್ಪಿನಲ್ಲಿ ತಂದೆಯನ್ನು ಕಷ್ಟಪಡಿಸುವುದು ನ್ಯಾಯವಲ್ಲವೆಂದರಿತು ತನ್ನ ಪಾಡನ್ನು ತಾನೇ ನೋಡಿಕೊಳ್ಳಲಾರಂಭಿಸಿದನು.

ಈ ರೀತಿಯಾಗಿರುವ ಕಾಲದಲ್ಲಿಯೇ ಇಂದಿರೆಯ ಜ್ಞಾಪಕವು ಬರುವುದು. ಲಂಕಾಪಟ್ಟಣದಲ್ಲಿ ರಾಕ್ಷಸರ ಮಧ್ಯೆ ಸಿಕ್ಕಿದ್ದ ಸೀತಾದೇವಿಯಂತೆ ಇಂದಿರೆಯು ತಪಿಸುತ್ತಿರುವುದನ್ನು ನೆನೆದು ಪ್ರಲಾಪಿಸುವನು. ಇವನೀ ರೀತಿಯಾಗಿರಲು ಇಂದಿರೆಯ ಸ್ಥಿತಿಯನ್ನು ಸ್ವಲ್ಪ ವರ್ಣಿಸೋಣ. ಅವಳನ್ನು ಕಂಡಾಗಲೆಲ್ಲಾ ಇಬ್ಬರೂ ಶಪಿಸುವರು. ಅವಳು ಪ್ರೌಢೆಯಾದನಂತರ ಮತ್ತಷ್ಟು ಸೌಂದರ್ಯದಿಂದ ಶೋಭಿಸಿದಳು. ಅವಳಿಗೆ ಲೀಲೆಯು ಪರಮ ಶತ್ರುವಾಗಿದ್ದಳು. ಸತೀಶನು ಇಂದಿರೆಯ ಮೇಲಿದ್ದ ಪ್ರೀತಿಗಾಗಿಯೂ, ಶಚೀಂದ್ರನ ಪ್ರಾರ್ಥನೆಗಾಗಿಯೂ ಇಂದಿರೆಗೆ ತಲೆಯುಕೂದಲನ್ನು ಮಾತ್ರ ತೆಗಿಸಿರಲಿಲ್ಲ. ಅವಳು ಆಭರಣಗಳನ್ನೆಲ್ಲಾ ಧರಿಸಿಯೇ ಇದ್ದಳು. ಅವಳ ಈ ಸ್ಥಿತಿಯನ್ನು ಕಂಡು ಸೈರಿಸದ ಲೀಲೆಯೂ, ಶಂಕರಿಯೂ ಸದಾ ದೂಷಿಸುತ್ತಲೇ ಇದ್ದರು. ಇಂದಿರೆಯನ್ನು ನೋಡಿದಾಗಲೆಲ್ಲಾ, "ಗಂಡನನ್ನು ನುಂಗಿದವಳಿಗೆ ಆಭರಣಗಳೇಕೆ" ಎನ್ನುವರು. ತಲೆಗೆ ಅಭ್ಯಂಜನ ಸ್ನಾನ ಮಾಡಿದರಾಗಲೀ ತಲೆ ಬಾಚಿಕೊಂಡರಾಗಲೀ ನಾಳೆ ತೆಗೆಯುವ ಕೂದಲಿಗೆ ಸಂಪಂಗಿ ತೈಲವೇಕೆ? ಎಂದು ಶಂಕರಿಯು ಹೇಳುವಳು. ಸೀರೆಯನ್ನು ಚೆನ್ನಾಗಿ ಒಗೆದರೆ "ಇಷ್ಟು ಶುಭ್ರವಾಗಿ

ಸೀರೆಯೊಗೆದುಟ್ಟುಕೊಂಡು ಯಾವ ಮಿಂಡನಿಬಿರಿಗೆ ಸಿದ್ಧಬೇಕು" ಎನ್ನುವಳು. ಪುಸ್ತಕವನ್ನು ಓದುತ್ತಿದ್ದರೆ, "ಯಾವ ಮಿಂಡನಿಗೆ ಕಾಗದ ಬರೆಯಬೇಕು. ನಾರಾಯಣ, ಕೃಷ್ಣ ಎಂದು ಹೇಳಿಕೊಂಡಿರದೆ ಓದೇತಕ್ಕೆ" ಎನ್ನುವಳು. ಅಯ್ಯೋ ಕಷ್ಟವೆ! ಇವುಗಳಿಂದ ಪಾರಾಗುವುದೆಂದಿಗೆ ಎಂದು, ವೀಣೆಯನ್ನಾದರೂ ಬಾರಿಸೋಣ ವೆಂದರೆ," ನೀನು ಹೆಣ್ಣಾಗಿ ಹುಟ್ಟಿದ್ದಕ್ಕೆ ವೀಣೆ ಬೇರ, ಸಂಗೀತ ಬೇರೆ ಯಾವ ಗಂಡನಿಗೆ ವೀಣೆ ಬಾರಿಸಿ ಸಂತೋಷಪಡಿಸಬೇಕು." ಎನ್ನುವಳು. ಅಯ್ಯೋ ಕಷ್ಟವೇ! ಇನ್ನೇನು ಮಾಡುವುದು. ಎಂದು ಸುಮ್ಮನೆ ಕುಳಿತಿದ್ದರ, "ಏನೇ? ಮೂದೇವಿಯಂತೆ ಕುಳಿತಿರುವ? ಈಗಲೇ ಇಷ್ಟೊಂದು ಹಠವೂ ಅಸೂಯೆಯೂ ಇದ್ದರ ಮುಕ್ಕ ದಿನಗಳನ್ನು ಹ್ಯಾಗೆ ಕಳೆಯುತ್ತೀಯೋ ನಾನು ಬೇರ ಕಾಣೆ' ಎನ್ನುವಳು. ಹೀಗೆಲ್ಲಾ ಅನ್ನುತ್ತಾಳಲ್ಲಾ ಎಂದು ಸ್ನೇಹಿತರೊಂದಿಗೆ ಕುತೂಹಲವಾಗಿ ಮಾತನಾಡುತ್ತಿದ್ದರ, "ಆಹಾ! ಗಂಡನನ್ನು ನುಂಗಿಕೊಂಡಿರುವಾಗಲೇ ಇಷ್ಟು ಕುತೂಹಲವಾಗಿರುವೆಯಲ್ಲಾ. ಎಲ್ಲರಂತೆ ನೀನೂ ಇದ್ದರ ಇನ್ನು ಹ್ಯಾಗಿರುತ್ತಿದ್ದೆಯೋ" ಎನ್ನುವಳು. ಯಾವುದಾದರೂ ಒಂದು ಮಾತಿಗೆ ಜವಾಬು ಹೇಳಿದರ, "ಏನೇ ನನ್ನನ್ನು ಈರೀತಿ ಹೇಳುವೆಯಾ, ನನಗೇನು ಮನೆಯಿಲ್ಲವೆ? ತಿನ್ನುವುದಕ್ಕೆ ಅನ್ನವಿಲ್ಲವೇ? ನಿಮ್ಮ ಮನೆ ಅನ್ನಕ್ಕೆ ಗತಿಗೆಟ್ಟು ಬಂದಿರುವಳೆಂದು ತಿಳಿದೆಯೇನು" ಎನ್ನುವಳು. ತನ್ನ ತಾಯಿಯು ಈ ರೀತಿ ಹೇಳುವುದನ್ನು ಕಂಡು ಸೈರಿಸದ ಲೀಲೆಯು ತಾನೂ ಕೆಲವು ಪೇಳಿ ಇಂದಿರೆಯನ್ನು ಬೈದು ಹೂಡೆಯುವಳು. ಅಯ್ಯೋ; ಇಂದಿರೆಯೇನು ಮಾಡಿಯಾಳು? ಸತೀಶನ ಪ್ರೇಮಪುತ್ರಿಯಾಗಿ, ಸೌಂದರ್ಯದ ಗಣಿಯಾಗಿ, ವಿದ್ಯೆಯಲ್ಲಿ ಸರಸ್ವತಿಯಾಗಿ ಇರುವ ಇಂದಿರೆಗೆ ಇಂಥಾಗತಿಯು ಪ್ರಾಪ್ತವಾಗುವುದೆಂದು ಯಾರಿಗೆ ಗೊತ್ತಿತ್ತು? ಎಲ್ಲಾ ಈಶ್ವರ ಮಾಯೆ.

ಇವಳ ಸ್ಥಿತಿಯು ಈ ರೀತಿಯಾಗಿರಲು, ಸುಂದರೇಶನ ಸತಿಯನ್ನು ಸ್ವಲ್ಪ ನೋಡೋಣ. ಸುಂದರೇಶನ ಪತ್ನಿಯು ಯಮಸ್ವರೂಪಳು. ಅವಳು ಮಾತಿಗೆ ಮೊದಲುಮಾಡಿದರೆ ತಾಟಕಿಯೂ

ಕೂಡ ಹೆದರುವಳು. ಅವಳ ವಸ್ತ್ರಾಭರಣಗಳನ್ನು ನೋಡಿದರ ಪತಿ ಬಡವನು ಸನ್ಯಾಸಾಶ್ರಮವನ್ನೇ ಸೇರಬೇಕು. ಸುಂದರೇಶನ ಬುದ್ಧಿಗೂ ನಾಗರೀಕತೆಗೂ ತಕ್ಕ ಪತ್ನಿಯಿವಳಲ್ಲ. ಇದೂ ದೌರ್ಭಾಗ್ಯ. ಇಂದಿರೆಯು ವಿಧವೆಯಾಗಿ ಈರೀತಿ ತಪಿಸಲೇಕೆ? ಸುಂದರೇಶನು ಇಂಥಾ ರಕ್ಕಸಿಯ ಕೈಗೆ ಸಿಕ್ಕಿ ಪರಿತಪಿಸಲೇಕೆ? ಎಲ್ಲಾ ಈಶ್ವರೇಚ್ಛೆ, ಸುಂದರೇಶನ ಪತ್ನಿಯು ಮಹಾ ಕೋಪಿಷ್ಟಳು. ಕಾಲು ಕೆರದು ಜಗಳಕ್ಕೆ ನಿಲ್ಲುವಳು. ಹೇಳಿದಂತೆ ಕೇಳುವುದು ಅವಳ ಹಗೆ ಯಲ್ಲೇ ಬರಯಲಿಲ್ಲ. ಶರೀರವನ್ನು ಶುದ್ಧವಾಗಿ ಇಟ್ಟುಕೊಳ್ಳುವುದೆ ನ್ನುವುದು ಅವಳ ಜಾತಕದಲ್ಲೇ ಇಲ್ಲ. ಅವಳು ಮಾಡಿದ ಅಡಿಗೆಯ ನ್ನು ಊಟಮಾಡಲು ನರಕಲೋಕದ ಮನುಷ್ಯರಿಂದ ಅಸಾಧ್ಯವು. ಸುಂದರೇಶನಿಗಿಲ್ಲದೆಯೇ ಮಾಡಿದ್ದನ್ನೆಲ್ಲಾ ತಿಂದುಬಿಡುವಳೆಂದರ ಅವಳಿಗೆ ಪತಿವಿಶ್ವಾಸ ನೆಪ್ಪಿರಬಹುದು? ಅವಳು ನಿದ್ರಾಂಗನೆಯ ಉಪಾಸಕಳು. ನಿದ್ರೆಗೆ ವಶಳಾದರ ಮನೆ ಹತ್ತಿ ಉರಿಯುತ್ತಿದ್ದರೂ ಅವಳಿಗೆ ತಿಳಿಯದು. ಒಂದು ದಿನ ಸುಂದರೇಶನು ಕೋರ್ಟಿನಿಂದ ಮನೆಗೆಬಂದು ಬಾಗಿಲು ತಟ್ಟಿ ನೋಡಲು ಬಾಗಿಲು ತೆಗೆಯದ್ದರಿಂದ ಸಚೀಂದ್ರನ ಮನೆಯಲ್ಲಿಯೇ ಊಟಮಾಡಿ ಮಲಗಿದನು. ಎಷ್ಟೋ ದಿನ ತಾನೇ ಎಲೆಗೆ ಬಡಿಸಿಕೊಂಡು ಊಟಮಾಡಿರುವನು. ಸುಂದರೇಶನು ಮಹಾ ಮಾನಿಷ್ಟನಾದ್ದರಿಂದ ಹೊರಗೆ ಹೇಳಿಕೊಳ್ಳದೆ ಇದ್ದನು. ಒಂದು ಮೃಗಕ್ಕೆ ಮತ್ತೊಂದು ಮೃಗದಲ್ಲಿರುವದಕ್ಕಿಂತ ಹೆಚ್ಚು ವಾಂಛಲ್ಯವು ಸುಂದರೇಶನಿಗೆ ಅವನ ಹೆಂಡತಿಯಲ್ಲಿರಲಿಲ್ಲ.

ಈರೀತಿಯಾಗಿ ಸುಂದರೇಶನಿಗೊಂದು ವಿಧವಾದ ಚಿಂತೆ. ಇಂದಿರೆಗೊಂದುವಿಧವಾದ ಚಿಂತೆ. ಶಚೀಂದ್ರನಿಗೊಂದು ಬಗೆಯ ಚಿಂತೆ. ಸತೀಶನಿಗೊಂದು ಬಗೆ ಚಿಂತೆಯಿಂದ ದಿನಗಳು ಕಳೆಯಲಾರಂಭಿಸಿದವು. ರಸಿಕನಾದ ಪುರುಷನು ಅರಸಿಕಳಾದ ಸ್ತ್ರೀಯನ್ನು ಹೊಂದಿ ದುಃಖ ಪಡುವುದು ಸಹಜವೇ! ಆದರೂ ಇಂದಿರೆಯ ಸ್ಥಿತಿಯು ಮಾತ್ರ ಬಹಳ ಶೋಚನೀಯವಾಗಿದ್ದಿತು! ಇವಳ ದುಃಖವನ್ನು ಪರಮಾತ್ಮನೇ ಕೇಳಬೇಕು.

---

# ಎಂಟನೆಯ ಅಧ್ಯಾಯ.

## ಶಂಕರಿಯ ಕ್ರೂರತ್ವವು.

ಹಿಂದಿನ ಅಧ್ಯಾಯದಲ್ಲಿ ಹೇಳಿದಂತೆ ಎಲ್ಲರೂ ಕಾಲಕಳೆಯುತ್ತಿರುವಾಗಲೇ ನಾಲ್ಕು ವರ್ಷಗಳು ಕಳೆದು ಹೋದುವು. ಇಂದಿರೆಯ ಕಷ್ಟಗಳು ದಿನದಿನಕ್ಕೆ ಬೆಳೆಯುತ್ತಾ ಬಂದವು. ಕಾರಣವಿರಲಿ, ಇಲ್ಲದಿರಲಿ, ಇಂದಿರೆಯನ್ನು ಪೀಡಿಸುವುದೇ ತಮ್ಮ ಕರ್ತವ್ಯವೆಂದು ತಿಳಿದ ಶಂಕರಿಯೂ, ಲೀಲೆಯೂ, ಅವಳನ್ನು ನಾನಾವಿಧವಾಗಿ ಹಿಂಸಿಸಲಾರಂಭಿಸಿದರು. ಇಂದಿರೆಯು ಬೀದಿಬಾಗಿಲಲ್ಲಿ ನಿಲ್ಲಕೂಡದು. ಕಿಟಕಿಯ ಬಳಿ ನಿಲ್ಲಕೂಡದು. ಹಾಗೆ ಸ್ವಲ್ಪ ನಿಂತು ಬೀದಿಯ ಕಡೆ ನೋಡುತ್ತಿದ್ದರೆ, "ಏನೇ! ಬೀದಿಯಲ್ಲಿ ಹೋಗುವವರಲ್ಲಿ ಯಾರು ರೂಪವಂತನೆಂದು ನೋಡುತ್ತಿರುವೆಯಾ, ಛೀ! ಒಳಕ್ಕೆ ಹೋಗು, ನಿನ್ನ ಲಕ್ಷಣಕ್ಕೆ ಇದು ಬೇರೆ, ಕಿಟಕಿಯ ಬಳಿ ಇನ್ನು ನಿಂತು ನೋಡು, ನಿನಗೆ ಮಾಡುವೆನು" ಎನ್ನುವಳು. ಒಂದು ದಿನ ಇಂದಿರೆಯು ಸೀರೆಯನ್ನು ಒಗೆಯುತ್ತಿರುವಾಗ ಶಂಕರಿಯು ಒಂದೇ ಉಸಿರಿಗೆ ಓಡಿ ಬಂದು ಇಂದಿರೆಯನ್ನು ದರದರನೆ ಎಳೆದುಕೊಂಡು ಹೋಗಿ, "ಎಲೇ ಪಾತಕೀ! ನಮ್ಮ ಕುಲಕ್ಕೆ ಕಳಂಕವನ್ನು ತರಲೆಣಿಸಿದೆಯಲ್ಲವೇ? ನಿನ್ನನ್ನು ಮನೆಯಲ್ಲಿಟ್ಟುಕೊಂಡು ನಾವುಗಳೆಷ್ಟು ದೂರು ಕೇಳಬೇಕಾಗಿರುವುದು" ಎಂದಳು

ಇಂದಿರೆಗೆ ಇದೇನು ವಿಷಯವೆನ್ನುವುದು ಕೂಡ ತಿಳಿಯದು. ತನ್ನನ್ನೇನೋ ಅವಮಾನಹೇತುವಾಗಿ ನಿಂದಿಸುವಳೆಂದುಮಟ್ಟಿಗೆ ತಿಳಿದುಕೊಂಡು ವಿಸ್ಮಿತಳಾಗಿ ನಿಂತಿದ್ದಳು. ಶಂಕರಿಯು "ಏನೇ! ದುರದುರನೆ ನೋಡುತ್ತಿರುವೆ. ನೀನು ಹಾಗೆ ನೋಡುವುದರಿಂದ ಈಶ್ವರನ ಫಾಲನೇತ್ರದಿಂದ ಭಸ್ಮಿತನಾದ ಮನ್ಮಥನಂತೆ ನಾನೂ ಭಸ್ಮಿ-

ತಳಾಗುವೆನೆಂದು ತಿಳಿದೆಯೇನು ? ಇಲ್ಲ, ನಮ್ಮ ಗುಟ್ಟನ್ನು "ಇವಳು ಕಂಡು ಬಿಟ್ಟಳಲ್ಲಾ ಎಂದು ನೋಡುವೆಯೋ" ಎಂದಳು.

ಇವಳಿಷ್ಟು ಹೇಳಿದ್ದೂ ಇಂದಿರೆಗೆ ಸ್ವಲ್ಪವೂ ಅರ್ಥವಾಗಲಿಲ್ಲ. "ನಾನೇನು ಮಾಡಿದ್ದನ್ನು ಇವಳು ಕಂಡು ಬಿಟ್ಟಳು" ಎಂದು ಯೋಚಿಸಿ ಕೊನೆಗೆ ಸ್ವಲ್ಪ ಧೈರ್ಯತೊಂಡು, "ನಾನೇನು ಅಪರಾಧಮಾಡಿದೆನು" ಎಂದಳು.

ಶಂಕರಿಯು, "ಎಲೇ ಮಾಯಗಾತಿ! ನನಗಾಗಲೇ ಗೊತ್ತು, ಇಷ್ಟುಹೊತ್ತು ನಿನ್ನ ತಪ್ಪನ್ನು ಹ್ಯಾಗೆ ಮರೆಮಾಡೋಣವೆಂದು ಯೋಚಿಸಿದೆಯೋ! ಎಲೇ ಕಳ್ಳಿ! ಪಕ್ಕದಮನೆಯಲ್ಲಿರುವ ಆ ತುಂಟ ಕಾಮಪಾಲನನ್ನು ಕಂಡು ನೀನು ನಕ್ಕದ್ದುಂಟೋ ಇಲ್ಲವೋ ಹೇಳು" ಎಂದಳು.

ಕೊನೆಯ ವಾಕ್ಯವು ಮುಗಿಯಿತೋ ಇಲ್ಲವೋ ಇಂದಿರೆಯು ದೊಡ್ಡ ವೃಕ್ಷವು ಗಾಳಿಗೆ ಉರುಳಿ ಕೆಳಕ್ಕೆ ಬೀಳುವಂತೆ ಮೂರ್ಛಿತಳಾಗಿ ಬಿದ್ದು ಬಿಟ್ಟಳು. ಪಾಪ! ಏನು ಮಾಡಿಯಾಳು ? ಅವಳಾದರೋ ಮಹಾ ಉತ್ತಮಳು. ಬಾಲ್ಯದಿಂದಲೂ ಓದುಕಲಿತ ಮೇಧಾವಿ. ಪತಿ ಪತ್ನಿಯರೆನ್ನುವ ಮಾತಿನ ಅರ್ಥವನ್ನೇ ಅರಿಯದ ಕೇವಲ ಬಾಲ್ಯದಲ್ಲಿ ತಂದೆಯು ಮತಿಹೀನತ್ವದಿಂದ ತನಗಿಷ್ಟವಿಲ್ಲದವನೊಬ್ಬನನ್ನು ವರಿಸಿ ವಿಧವೆಯಾದದ್ದೂ ತರುವಾಯ ಬೆಳೆಯುತ್ತಾ ತನ್ನ ಸ್ಥಿತಿಯನ್ನೂ ಇನ್ನು ತಾನು ನಡೆಸಬೇಕಾದ ವಿಧಗಳನ್ನು, ತನ್ನ ಜೀವಿತಕಾಲ ಕಳೆಯುವ ರೀತಿಯನ್ನೂ ಅನೇಕ ಪುಸ್ತಕಗಳ ಮುಖಾಂತರವೂ ಶಚೀಂದ್ರ ಮತ್ತು ಸುಂದರೇಶ ಇವರ ಮುಖಾಂತರವೂ ಅರಿತಿದ್ದಳು. ಶ್ರೀಮದ್ರಾಮಾಯಣ, ಮಹಾಭಾರತ ಮೊದಲಾದುವುಗಳನ್ನು ಓದಿ ಅವುಗಳ ಮುಖಾಂತರ ವಿಧವೆಯರಾದ ಕೌಸಲ್ಯಾದಿಗಳೂ, ತಾರೆ, ನಳಾಯನಿ ಮೊದಲಾದವರು ಇದ್ದ ರೀತಿಯನ್ನೂ ಪತಿಯನ್ನು ಕಳೆದುಕೊಂಡ ಸಾವಿತ್ರಿಯು ಪುನಃ ಪತಿಯ ಪ್ರಾಣವನ್ನು ಉಳಿಸಿದ್ದನ್ನೂ ಚೆನ್ನಾಗಿ ತಿಳಿದಿರುವಳು. ಒಳ್ಳೆಯ ಮನಶಕ್ತಿಯುಳ್ಳವಳು. ಇನ್ನು

ತನಗೆ ಈ ಪ್ರಪಂಚದಲ್ಲಿ ಭಗವಂತನು ಹೊರ್ತು ಬೇರೆ ದಿಕ್ಕಿಲ್ಲವೆಂದರಿತಳು. ಆದರೂ, "ಅನೇಕ ವರ್ಷಗಳು ಸುಖವನ್ನನುಭವಿಸಿ ಪುತ್ರ, ಪುತ್ರಿಯರನ್ನು ಪಡೆದೂ ಕೂಡ ವೃದ್ಧವಯಸ್ಸಾಗಿದ್ದರೂ ಸರಿ. ಹೆಂಡತಿ ಸತ್ತ ಮೂವತ್ತನೇ ದಿನವೇ ಪುರುಷರು ಮಾತ್ರ ವಿವಾಹ ಮಾಡಿಕೊಳ್ಳಬಹುದಂತೆ, ಸ್ತ್ರೀಯರು ಮಾತ್ರ ಈ ಗತಿಗಾಳಾಗಬೇಕೆ ! ಶಾಸ್ತ್ರ ವಿರೋಧವಾಗಿರಲು ಕಾರಣವೇನು ? ಶಾಸ್ತ್ರವನ್ನು ಮಾಡಿದವರೂ ಶಾಸ್ತ್ರಬೋಧಕರೂ, ಪುರುಷರೇ ಆಗಿರುವದರಿಂದಲ್ಲವೇ" ಎಂದು ಮಾತ್ರ ಪದೇಪದೇ ಚಿಂತಿಸುವಳು. ಆದರೂ ಪುನರ್ವಿವಾಹಿತಳಾಗಬೇಕೆಂಬ ಇಷ್ಟ ಮಾತ್ರವಿಲ್ಲ. ತನಗಿನ್ನು ಈಶ್ವರಭಕ್ತಿಯೇ ತಕ್ಕದೆಂದು ನಿಶ್ಚಯಿಸಿದಳು. ಇಂಥಾ ಉತ್ತಮಚರಿತ್ರಳಾದ ಇಂದಿರೆಯನ್ನು ಶಂಕರಿಯು ಈರೀತಿಯಾಗಿ ದೂಷಿಸಲು ಅವಳು ರಾಕ್ಷಸಿಯರ ಮಧ್ಯೆ ಸಿಕ್ಕಿದ ಸೀತೆಯಂತೆ ತಪಿಸಲಾರಂಭಿಸಿದಳು. ಬೇರೆಯಾವನನ್ನಾದರೂ ನೋಡಿದೆನೆಂದು ಹೇಳದೆ ಇಷ್ಟು ಮಟ್ಟಿಗಾದರೂ ಹೇಳಿದಳಲ್ಲಾ. ಇನ್ನೇನಾದರೂ ಹೇಳಿದ್ದರೇನು ಗತಿ" ಎಂದು ಚಿಂತಿಸಿದಳು.

ಈ ರೀತಿಯಾಗಿ ಇಂದಿರೆಯು ಮೂರ್ಛೆಯಾಗಿ ಬಿದ್ದ ಸದ್ದನ್ನು ಕೇಳಿ ಲೀಲೆಯು ಓಡಿಬಂದು ವಿಷಯವನ್ನರಿತವಳಾದಾಗ್ಯೂ ಅರಿಯದವಳಂತೆ ಇಂದಿರೆಯನ್ನು ಕಂಡು ದಯವುಳ್ಳವಳಾಗಿ ತಾಯಿಯನ್ನು ಕೋಪಿಸಿಕೊಂಡು ಸ್ವಲ್ಪ ತಣ್ಣೀರನ್ನು ತಂದು ಮುಖಕ್ಕೆ ಚಿಮುಕಿಸಿ, "ಇಂದಿರೇ, ಆದದ್ದಾಯಿತು, ಹೋದದ್ದೋಗಲಿ, ನಿನ್ನ ಮೇಲೆ ಮನಸ್ಸಿನಲ್ಲಿ ಸ್ವಲ್ಪ ಭಯವಿರಲಿ, ಇನ್ನು ಹೀಗೇನಾದರೂ ನಡೆಯಿತೋ ನಿಮ್ಮಪ್ಪನ ಹತ್ತಿರ ಹೇಳಿ ಶಿಕ್ಷಿಸುವೆನು" ಎಂದು ಬಹು ಅಧಿಕಾರ ದೋರಣೆಯಿಂದ ಹೇಳಿದಳು. ಒಂದುದಿನ ಬೆಳಿಗ್ಗೆ ಇಂದಿರೆಯು ಮನೆಯ ಕೆಲಸಗಳನ್ನು ಮಾಡುತ್ತಿದ್ದಾಗ ಏನೋ ಕೆಲಸದ ಉದ್ದಿಶ್ಯ ಶಂಕರಿಯು ಶಯನಿಸಿದ್ದ ಕೊಠಡಿಯ ಬಳಿ ಹೋದಳು. ಆಗತಾನೇ ಕಣ್ಣುಹೊಸಕಿಗೊಂಡು ಏಳಲು ಪ್ರಯತ್ನಿಸಿದ್ದ ಶಂಕರಿಯು ಹುತ್ತದಿಂದ ಮೇಲಕ್ಕೆದ್ದ ನಾಗರ ಹಾವಿನಂತೆ ಎದ್ದು ಇಂದಿರೆಯ ಕೇಶರಾಶಿ

ಯನ್ನು ಕೈಯಲ್ಲಿ ಬಲವಾಗಿ ಹಿಡಿದುಕೊಂಡು ಕೆಳಗೆತಳ್ಳಿ ಕಾಲಿನಿಂದ ಒದ್ದಳು. ಈ ಶಬ್ದವನ್ನು ಕೇಳಿ ಜಗಲಿಯಲ್ಲಿದ್ದ ಸೇವಕರೂ ಒಳಗೆಮಲಗಿದ್ದ ಸತೀಶನೂ ಲೀಲೆಯೂ ಎದ್ದು ಬರಲು ಶಂಕರಿಯು ಅವರನ್ನು ನೋಡಿ, "ಈ ಮೂದೇವಿಯು ಯಾತಕ್ಕೆ ಏಳುತ್ತಲೂ ನಾನು ಮಲಗಿರುವಕಡೆ ಬರಬೇಕು. ಏಳುತ್ತಲೂ ಇವಳ ಮುಖವನ್ನು ನೋಡಿದ್ದರಿಂದ ನಾಲ್ಕೈದು ದಿನಗಳಿಂದ ನನಗೆ ಅನ್ನವೇ ಸೇರಲಿಲ್ಲ" ಎಂದಳು. ಇವಳ ಮಾತುಗಳನ್ನು ಕೇಳಿದ ಸೇವಕರು ಲಜ್ಜಿತರಾಗಿ ಇಂದಿರೆಯ ಪದವಿಯನ್ನೂ ಈಗ ಈ ನರರಾಕ್ಷಸಿಗಳ ಕೈಗೆ ಸಿಕ್ಕಿ ಅವಳನುಭವಿಸುತ್ತಿರುವ ಕ್ಲೇಶಗಳನ್ನೂ ನೋಡಿ ಕಣ್ಣೀರು ಸುರಿಸುತ್ತಾ ಹೋದರು. ಸತೀಶನು ಇಂದಿರೆಯ ಗತಿಯನ್ನುನೋಡಿ ಕಣ್ಣೀರುಸುರಿಸುತ್ತಾ ತಾನು ಅವರ ಕೈಗೆ ಸಿಕ್ಕಿರುವುದರಿಂದ ಮಾತಾಡಲು ಹೆದರಿದವನಾಗಿ ತನ್ನ ಕೊಠಡಿಗೆ ಹೊರಟು ಹೋದನು. ಲೀಲೆಯೂ, "ಇಂದಿರೇ, ನಿನಗಷ್ಟು ಅರಿವಿಲ್ಲವೇ? ನೀನೇತಕ್ಕೆ ಆಕಡೆ ಹೋಗಬೇಕಾಗಿತ್ತು" ಎಂದಳು. ಅದಕ್ಕೆ ಇಂದಿರೆಯು, "ಚಿಕ್ಕಮ್ಮಾ! ಆ ಗೂಡಿನಲ್ಲಿ ರಂಗವಲ್ಲಿ ಪುಡಿ ಇತ್ತು. ಅದನ್ನುತೆಗೆಯಲು ಹೋದೆನು" ಎಂದಳು. "ಸರಿ, ಇನ್ನು ಮೇಲೆ ಹಾಗೆ ಮಾಡಬೇಡ ಹೋಗು, ಬೆಳಗಾಯಿತು. ನಿನ್ನ ಕೆಲಸವನ್ನು ಮಾಡಲು ಹೋಗು" ಎಂದು ಅಪ್ಪಣೆಮಾಡಿ ಹೊರಟು ಹೋದಳು. ಇಂದಿರೆಯು ತನ್ನ ಗತಿಯನ್ನು ಮನಸ್ಸಿನಲ್ಲೇ ಸ್ಮರಿಸಿಕೊಂಡು ತನ್ನ ಕೆಲಸವನ್ನು ಮಾಡಲಾರಂಭಿಸಿದಳು.

ಅಹಾ! ಏನನ್ಯಾಯ! ಇಂದಿರೆಯು ಪ್ರತಿದಿನವೂ ಬೆಳಗ್ಗೆ ೫ ಘಂಟೆಗೆದ್ದು ಬೀದಿಬಾಗಿಲಿಗೆ ನೀರುಹಾಕಿ ಗುಡಿಸಿ, ಸಾರಿಸಿ ರಂಗವಲ್ಲಿಯನ್ನು ಹಾಕಿ ಮುಸುರೆಯೆಲ್ಲಾ ಉಜ್ಜಿ ಎಲ್ಲರೂ ಏಳುವವರೆಗೂ ಕಾದಿದ್ದು ಎಲ್ಲರ ಹಾಸಿಗೆಯನ್ನೂ ಸುತ್ತಿಟ್ಟು ಮನೆಯನ್ನೆಲ್ಲಾ ಗುಡಿಸಿ ತರುವಾಯ ಮಡಿಯುಟ್ಟುಕೊಂಡು ಅಡಿಗೆ ಮಾಡಬೇಕು. ಶಂಕರಿಯು ಬಂದದ್ದು ಮೊದಲು ಕಸಾ ಗುಡಿಸುವಳು ಅಡಿಗೆಯವಳು ಎಲ್ಲರನ್ನೂ ಕಳುಹಿಸಿದ್ದಾಯಿತು. ಹೀಗಿರುವಾಗ ಶಂಕರಿಯು ಏಳುವದಕ್ಕೆ ಮುಂಚೆ ಬಾಗಿಲು ಸಾರಿಸಿ ರಂಗವಲ್ಲಿ ಹಾಕದಿದ್ದರೆ ಆದಿನ ಇಂದಿ

ರಯ ಪಾಡು ಹೇಳತೀರದು. ಆದುದರಿಂದಲೇ ಇಂದಿರೆಯು ಶಂಕರಿ ನೋಡ ಬಾರದವರು ಏಳುವುದಕ್ಕೆ ಮುಂಚೆ ಎದ್ದು ಅವಳ ಕಣ್ಣಿಗೆ ಬೀಳದಂತೆ ರಂಗವಲ್ಲಿಯನ್ನು ತೆಗೆದುಕೊಂಡು ಬರಬೇಕೆಂಬ ಭಯದಿಂದ ಶಬ್ದವಿಲ್ಲದೆ ಹೆಜ್ಜೆಯಮೇಲೆ ಹೆಜ್ಜೆಯನ್ನಿಟ್ಟು ಹೋದರೂ ಇವಳ ಗ್ರಹಚಾರದಿಂದ ಶಂಕರಿಗೆ ಎಚ್ಚರವಾಯಿತು. ಎಚ್ಚರ ತಾನೇ ಏನು ! ತನ್ನ ಕಣ್ಣಿಗೆ ಬಿದ್ದ ಮಾತ್ರಕ್ಕೇ ಇಷ್ಟು ಹೊಡೆಯಬೇಕೇ ? ಇಂಥಾ ಭಾಗ್ಯವಂತಳ ಮುಖವನ್ನು ಉಷಃಕಾಲದಲ್ಲಿ ನೋಡಿದ್ದರಿಂದ ಶಂಕರಿಗೆ ಅನ್ನ ಸೇರಲಿಲ್ಲವಂತೆ. ಮರಣವನ್ನಿದಿರುನೋಡುತ್ತಿರುವ ಇವಳಿಗೆ ಅನ್ನ ಸೇರದಿದ್ದರೆ ಪ್ರಪಂಚ ಮುಳುಗಿ ಹೋಗುತ್ತಿತ್ತೇ? ಇದಕ್ಕೆ ಇಂದಿರೆಯ ಮುಖದರ್ಶನವೇ ಮೂಲಕಾರಣವಂತೆ. ಇದಕ್ಕಾಗಿ ಅವಳಿಗೆ ಅಷ್ಟೊಂದು ಪ್ರಹಾರಗಳುಂಟಾದವು. ಊರಿನಲ್ಲಿ ನಡೆಯುತ್ತಿರುವ ಅಕ್ರಮಗಳನ್ನೂ ವ್ಯಾಜ್ಯಗಳನ್ನೂ ತಕರಾರುಗಳನ್ನೂ ನಿವೃತ್ತಿಸಲು ಸರ್ಕಾರದವರಿಂದ ನಿಯಮಿಸಲ್ಪಟ್ಟಿರುವ ಸತೀಶನ ಡಪ್ಯುಟೀಕಲೆಕ್ಟರ್ ಉದ್ಯೋಗವು ತನ್ನ ಮೊದಲನೇ ಹೆಂಡತಿಯ ಏಕಪುತ್ರಿಯೂ, ತನ್ನ ಪ್ರೇಮಪಾತ್ರಳೂ, ಎಲ್ಲರಿಂದ ಹೊಗಳಲ್ಪಡತಕ್ಕ ಗುಣವಿಶೇಷವುಳ್ಳವಳೂ. ದಿಕ್ಕಿಲ್ಲದವಳೂ ಆದ ಇಂದಿರೆಯನ್ನು ಕಾರಣವಿಲ್ಲದೆ ತನ್ನ ಕಣ್ಣಿದಿರಿಗೆ ಪ್ರಹರಿಸಿದ ಶಂಕರಿಯನ್ನು ಏನೂ ಮಾಡಲಾರದೇ ಹೋಯಿತು. ಆಹಾ ! ಮುದ್ದಿನ ಮಹಿಮೆಯೇನು ! ಕಿರಿಯ ಹೆಂಡತಿಯ ಮೋಹ ತಾನೇ ಎಷ್ಟು ?

ಮೇಲೆ ಹೇಳಿದಂತೆ ಇಂದಿರೆಯು ದುಃಖವನ್ನನುಭವಿಸುತ್ತಿರುವಲ್ಲಿ ಇಂದಿರೆಗೆ ಮಹಾ ವಿಪತ್ತು ಪ್ರಾಪ್ತವಾಯಿತು. ಹಿಂದೆ ಒಂದು ದಿನ ಶಂಕರಿಯು ಭಾವಿಯಬಳಿ ಯಾರನ್ನೋ ಕಂಡಳೆಂದು ಇಂದಿರೆಯನ್ನು ಹೊಡೆದಳಲ್ಲಾ. ಆದರೆ ಇಂದಿರೆ ಯಾದರೋ ನಿಷ್ಕಳಂಕಳು. ಆದರೆ ಶಂಕರಿಯು ಅನ್ಯಾಯ ಹೇಳಲಿಲ್ಲ. ಪಕ್ಕದಮನೆ ಮೆತ್ತಲಿನಲ್ಲಿದ್ದವನೊಬ್ಬನು ಇಂದಿರೆಯು ತನ್ನನ್ನು ನೋಡಿ ನಗದಿದ್ದರೂ ಇಂದಿರೆಯನ್ನು ನೋಡಿ ಅವನು ನಕ್ಕದ್ದುಂಟು. ಇದನ್ನು ನೋಡಿದ ಶಂಕರಿಯು ಇಂದಿರೆಯೂ ನಕ್ಕದ್ದುಂಟೆಂದು ಅನುಮಾನ ಪ್ರಮಾಣದಿಂದ

ಕ್ರಮಿಸಿದಳು. ಪಕ್ಕದ ಮನೆಯಲ್ಲಿದ್ದವನ ಹೆಸರು ಕಾಮಪಾಲ. ಅವನಿಗೆ ಸುಮಾರು ಇಪ್ಪತ್ತೈದುವರ್ಷ ವಯಸ್ಸಿರಬಹುದು. ಅವನು ತಂದೆಗೆ ಏಕಪುತ್ರನು. ಬಹಳ ತಪಸ್ಸುಮಾಡಿ ಜನಿಸಿದನು. ಆದ್ದರಿಂದ ಬಹಳ ಮುದ್ದಾಗಿ ಸಾಕಲ್ಪಟ್ಟವನು. ಮಗನಿಗೆ ಹತ್ತು ವರ್ಷಗಳಾಗುತ್ತಲೂ ಮಗನ ಭವಿಷ್ಯದೈಶ್ವರ್ಯಗಳನ್ನು ನೋಡದೆ ತಂದೆಯು ಗತಿಸಿದನು. ಕೇಳುವರಿಲ್ಲದ ಕಾಮಪಾಲನು ವಿದ್ಯೆಗೆ ತಿಲಾಂಜಲಿಯನ್ನುಕೊಟ್ಟು ಕೆಟ್ಟ ಕೆಲಸಗಳಲ್ಲಿ ಪ್ರವೇಶಿಸಿದನು. ಓದುವುದನ್ನು ಬಿಟ್ಟದ್ದು ಮೊದಲು ದುಷ್ಟರಸಹವಾಸಕ್ಕೆ ಸಿಕ್ಕಿ ಬೀದಿಬೀದಿ ಅಲೆಯುತ್ತಿದ್ದನು. ಅತಿ ಬಾಲ್ಯದಲ್ಲಿಯೇ ನಶ್ಯ ಹಾಕುವುದು, ವೇಶ್ಯೆಯರ ಗೃಹಕ್ಕೆ ಹೋಗುವುದು ಅಭ್ಯಾಸವಾಯಿತು. ಒಳ್ಳೇ ಷೋಕಾಗಿಕಿವಿಗೆ ಕಡುಕುಗಳನ್ನೂ ಕೈಗೆ ಕಪ್ಪವನ್ನೂ ಉಂಗುರಗಳನ್ನೂ ಧರಿಸಿಹೆಂಗಸರು ವಿಶೇಷವಾಗಿ ತಿರುಗಾಡತಕ್ಕ ಸ್ಥಳಗಳಲ್ಲೇ ಸಂಚರಿಸುತ್ತಿದ್ದನು. ಹೋಗುತ್ತಿರುವಾಗಲೇ ತನ್ನನ್ನು ಯಾರಾದರೂ ನೋಡುವರೇ ಎಂದು ತಿರಿಗಿ ತಿರಿಗಿ ನೋಡಿಕೊಂಡೇ ಹೋಗುವನು. ಯಾರಾದರೊಬ್ಬ ಸ್ತ್ರೀಯು ಇವನ ಚಡಾವಿನ ಸದ್ದನ್ನುಕೇಳಿ ಆಕಡೆ ಸರಿಯಲು ಪ್ರಯತ್ನಿಸಿದರ ಅವಳು ತನ್ನನ್ನು ನೋಡಿ ಮೋಹಿಸಿದ್ದಾಗಿ ಅವಳನ್ನೇ ಹಿಂಬಾಲಿಸುವನು. ಅವಳು ತಿರಿಗಿಯೂ ಕೂಡ ನೋಡದೆ ಹೋದರ ಉನ್ಮತ್ತನಂತೆ ಹಿಂತಿರುಗುವನು. ಒಂದು ಸಲ ತೆಪ್ಪೋತ್ಸವವನ್ನು ನೋಡಲು ಹೋಗಿದ್ದ ಸ್ತ್ರೀಯೊಬ್ಬಳನ್ನು ಹಿಂಬಾಲಿಸಿ ಅನುಭವಿಸಿದ ಅವಸ್ಥೆಯು ಜೀವಾವಧಿ ಮರೆಯುವಂತಿಲ್ಲ. ಅವನ ನಡತೆಯನ್ನು ಆ ಊರಿನವರೆಲ್ಲರೂ ಬಲ್ಲರು. ಇದನ್ನರಿತ ನೆರೆ ಹೊರೆಯವರು ಅವನಿರುವಕಡೆ ಸುಳಿಯುತ್ತಲೇ ಇರಲಿಲ್ಲ. ಇವನ ತಲೆ ಕಂಡರ ದುಷ್ಟಮೃಗವನ್ನುಕಂಡು ಹೆದರುವಂತೆ ಹೆದರುತ್ತಿದ್ದರು. ಎಲ್ಲರೂ ಹೀಗಿರುವಾಗ ಇಂದಿರೆಯ ವಿಷಯವಾಗಿ ಹೇಳಬೇಕೇ ? ಅವಳು ಹಿತ್ತಲಲ್ಲಿರುವಾಗ ಕಾಮಪಾಲನಮನೆ ಹಿತ್ತಲಿನಲ್ಲಿ ಕಾಗೆ ಸದ್ದು ಮಾಡಿದರೂ ಒಳಗೆಓಡಿ ಹೋಗುವಳು. ಆದರ ಕಾಮಪಾಲನು ಇಂದಿರೆಯನ್ನು ಹ್ಯಾಗಾದರೂ ಅಪಹರಿಸಬೇಕೆಂದೆಣಿಸಿದನು. ಅವಳು ಕಷ್ಟವನ್ನನುಭವಿಸಿದರೆ ಇವನು ಎಲ್ಲರಿಗಿಂತ ಹೆಚ್ಚಾಗಿ ಮರುಗುವನು. "ಅಯ್ಯೋ! ಈ ಸುಂದರಿಯು

ನನಗೆ ದೊರೆತರೆ" ಎಂದು ನಿಟ್ಟುಸಿರುಬಿಡುವನು. ಅವಳು ದೊಡ್ಡವಳಾದದ್ದು ಮೊದಲು ಅವಳ ಸೌಂದರ್ಯವನ್ನೂ ರೂಪವನ್ನೂ ನೋಡಿ ನೋಡಿ ಸಂಕಟ ಪಡುತ್ತಿದ್ದನು. ಅದು ಮೊದಲು ಅವಳನ್ನು ನೋಡುವುದೇ ಪರಮಾನಂದವೆಂದರಿತಿದ್ದನು. ಅವಳಾದರೂ ಸಾಮಾನ್ಯ ಸ್ತ್ರೀಯಲ್ಲ. ಹೊರಗೆ ಬರತಕ್ಕವಳಲ್ಲ. ಅವಳನ್ನು ಅವಳ ಮನೆಯಲ್ಲಿ ನೋಡುವುದೆನ್ನುವುದು ದುರ್ಲಭವು. ಆದ್ದರಿಂದ ಅವಳು ಬಾವಿಗೆ ನೀರಿಗೆ ಬರುವುದನ್ನಾಗಲಿ, ಬೆಳಿಗ್ಗೆ ಅಷ್ಟು ಹೊತ್ತಿಗೆಬಾಗಲಿಗೆ ನೀರು ಹಾಕುವುದನ್ನಾಗಲಿ ಇವನು ನೋಡುತ್ತಿದ್ದನು. ಹ್ಯಾಗಾದರೂ ಅವಳ ಮನಸ್ಸನ್ನು ಕೆಡಿಸಿ ಅವಳನ್ನು ತನ್ನ ಬಲೆಗೆ ಸಿಕ್ಕಿಸಿಕೊಂಡು ದೇಶಾಂತರಕ್ಕೆ ಹೋಗಬೇಕೆಂದು ನಿಶ್ಚೈಸಿದನು.

ಈ ಕಾರ್ಯದಲ್ಲಿ ತನಗೆ ಸಹಾಯಕರಾಗಿರಬೇಕೆಂದು ಆಯೂರಿನ ದೇವತೆಗಳನ್ನೆಲ್ಲಾ ಪ್ರಾರ್ಥಿಸಿದನು. ಇಂದಿರೆಯು ತನ್ನ ವಶವಾದರೆ ದೇವರನ್ನೆಲ್ಲಾ ಮೋಸಮಾಡಿ ಬಿಡೋಣವೆಂದೆಣಿಸಿದನು. " ಇಂದಿರೆಗೆ ಇನ್ನೂ ತಲೆಯ ಕೂದಲು ತೆಗಿಸಲಿಲ್ಲ." ಇದೂ ನನ್ನ ಅದೃಷ್ಟವೇ! ಎಂದುಸಂತೋಷಪಡುವನು. ಅವಳು ಮಾತನಾಡುವುದನ್ನು ಕೇಳಲು ಗೋಡೆಗೆ ಕಿವಿಗೊಟ್ಟು ಕೇಳುವನು. ಇಬ್ಬರಮನೆಗೂ ಒಂದೇ ಗೋಡೆಯಾದ್ದರಿಂದ ಸತೀಶನ ಮನೆಯಲ್ಲಿ ನಡೆಯುತ್ತಿದ್ದ ಮಾತುಕಥೆಗಳೆಲ್ಲಾ ಕಾಮಪಾಲನಿಗೆ ಕೇಳುತ್ತಿದ್ದವು. ಇದನ್ನು ಕೇಳುವಾಗ ಲೀಲೆಯೂ ಶಂಕರಿಯೂ ಇವಳನ್ನು ಹಿಂಸಿಸುತ್ತಿದ್ದುದನ್ನು ಅನೇಕ ತಡವೆ ಕೇಳುತ್ತಿದ್ದನು. ಕೆಲವು ವೇಳೆ ಇವಳನ್ನಿಷ್ಟು ಕಠಿಣವಾಗಿ ಹಿಂಸಿಸುತ್ತಿರುವಾಗ ಕೇಶಿಯ ಕೈಯಿಂದ ಊರ್ವಶಿಯನ್ನು ವಿಕ್ರಮಾದಿತ್ಯನು ಬಿಡಿಸಿದಂತೆ ಒಂದೇಉಸಿರಿಗೆ ಅವರಮನೆಗೆ ಧುಮುಕಿ ಇಂದಿರೆಯನ್ನು ಸೆಳೆದುಕೊಂಡು ಹೋಗೋಣವೆಂದು ಯೋಚಿಸುವನು. ಛೀ ! ಇದರಿಂದ ನಮಗೇ ವಿಪತ್ತುಂಟಾಗುವುದು. ನಮ್ಮ ಉದ್ದೇಶವೂ ಸಫಲವಾಗದು. ಈ ರೀತಿಯಾಗಿ ಇಂದಿರೆಯು ಇನ್ನೂ ಕಷ್ಟವನ್ನನುಭವಿಸಿದಷ್ಟೂ ನನಗೊಳ್ಳೆಯದು. ಹಿಂಸೆಯನ್ನು ಸಹಿಸಲಾರದೆ ನನ್ನೊಂದಿಗೆ ಓಡಿಬಂದುಬಿಡುವಳು. ಇದೇಸರಿಯಾದ ಯೋಚನೆಯೆಂದುಮನೋ

ರಾಜ್ಯವಮಾಡಿಕೊಂಡು ಮೇಲೆ ಹೇಳಿದ ಯೋಚನೆಗಳಿಂದ ಮತ್ತನಾಗಿ ಇಂದಿರೆಯನ್ನು ಕಂಡು ನಕ್ಕನು.

ಇಷ್ಟೊಂದು ದುರ್ಗುಣಗಳಿಂದ ತುಂಬಿದ ಕಾಮಪಾಲನು ತನ್ನಿಂದ ಸಾಧ್ಯವಾದ ಮಟ್ಟಿಗೂ ಪ್ರಯತ್ನಪಟ್ಟು ಇಂದಿರೆಯನ್ನು ಹೊಂದಲಾರದೆ ಕೊನೆಗೆ ಒಂದು ಕಾಗದವನ್ನು ಬರೆದು ಇಂದಿರೆಯು ಭಾವಿಗೆನೀರಿಗೆ ಬರುವ ಸಮಯವನ್ನೆದುರುನೋಡುತ್ತಿದ್ದು ಅವಳಕೈಗೆ ಕೊಡೋಣವೆಂದು ಕಾಗದವನ್ನುಬರೆದಿಟ್ಟುಕೊಂಡು ಇಬ್ಬರಮನೆಯ ಮಧ್ಯೆಯಿರುವ ಬೇಲಿಯ ಪಕ್ಕದಲ್ಲಿ ನಿಂತು ತಪ್ಪೇನಾದರೂ ಇದ್ದರೆ ಇಂದಿರೆಯು ಜುಗುಪ್ಸೆ ಹೊಂದುವಳು. ಆದ್ದರಿಂದ ಇನ್ನೊಂದುಸಲ ಓದಿನೋಡೋಣವೆಂದು ಕಾಗದವನ್ನು ಓದುತ್ತಾ ನಿಂತಿದ್ದನು. ಇದನ್ನು ಸ್ವಲ್ಪವೂ ಅರಿಯದ ಇಂದಿರೆಯು ಜಾಗ್ರತೆ ನೀರು ಸೇದಿಕೊಂಡು ಹೋಗೋಣವೆಂದು ಸೀರೆಯ ಗಂಟನ್ನು ಬಿಗಿಮಾಡಿಕೊಳ್ಳುವ ಸಮಯದಲ್ಲಿ ಬೇಲಿಯಬಳಿ ನಿಂತಿದ್ದ ಕಾಮಪಾಲನನ್ನು ಕಂಡು ಬಿಟ್ಟಳು. ಕೂಡಲೆ ಜಾಗ್ರತೆಯಾಗಿ ಕೊಡವನ್ನೆತ್ತಿಕೊಂಡಳು. ಇವಳುಸೀರೆಯ ಗಂಟನ್ನು ಬಿಗಿಮಾಡಿಕೊಂಡದ್ದನ್ನೂ ಪಕ್ಕದ ಮನೆ ಬೇಲಿಯಕಡೆ ನೋಡಿದ್ದನ್ನೂ ಕಂಡ ಶಂಕರಿಯು ಓಡಿಬಂದು, ಬೇಲಿಯಬಳಿ ಕಾಗದವನ್ನು ಹಿಡಿದುನಿಂತಿದ್ದ ಕಾಮಪಾಲನನ್ನೂ ಜಾಗ್ರತೆ ನೀರನ್ನೆತ್ತಿಕೊಂಡು ಬರುತ್ತಿದ್ದ ಇಂದಿರೆಯನ್ನೂ ಕಂಡೇ ಇಂದಿರೆಯನ್ನು ಹೊಡೆದದ್ದು.

ಇಂಥ ಸಾಕ್ಷ್ಯಗಳನ್ನು ಸಪ್ರಮಾಣವಾಗಿ ರುಜು ಪಡಿಸುವುದರಲ್ಲಿ ಶಂಕರಿಯು ಬಲು ಸಮರ್ಥಳು. ನಡೆದ ಕಾರ್ಯವು ನಿಶ್ಚಯವೋ ಸುಳ್ಳೋ ಎಂಬುದನ್ನು ಕೂಡ ವಿಚಾರಿಸಬೇಕಾದ ಅವಶ್ಯಕವಿಲ್ಲ. ಕೋರ್ಟಿಗೆ ದಾಖಲ್ಮಾಡುವಕೇಸುಗಳಲ್ಲಿ ಕೂಡಇಂಥಾ ಸಾಕ್ಷಿಗಳನ್ನು ಒದಗಿಸಲಾರರು. ಹೀಗೆ ನಿರಪರಾಧಿಗಳಾದ ಅಬಲೆಯರನ್ನು ದುಃಖ ಸಾಗರದಲ್ಲಿ ಮುಳುಗಿಸುವದರಿಂದ ಬರುವ ಪ್ರಯೋಜನವೇನೋ ವಾಚಕರೇ ಊಹಿಸಬಹುದು.

———

# ಒಂಬತ್ತನೆಯ ಅಧ್ಯಾಯ.

---

## ಇಂದಿರೆಯ ಪತ್ರ.

ಇಲ್ಲಿ ಇಂದಿರೆಯ ಸ್ಥಿತಿಯು ಈರೀತಿಯಾಗಿರಲು, ಮದರಾಸಿನಲ್ಲಿದ್ದ ಸುಂದರೇಶನ ಸ್ಥಿತಿಯನ್ನು ಸ್ವಲ್ಪವರ್ಣಿಸೋಣ. ಸುಂದರೇಶನು ತನ್ನ ಪತ್ನಿಯೊಡನೆ ಸಂಸಾರ ನಡೆಸುತ್ತಿದ್ದ ಲಕ್ಷಣವನ್ನು ಹಿಂದಿನ ಅಧ್ಯಾಯದಲ್ಲಿಯೇ ವಿವರಿಸಿರುವದರಿಂದ ಪುನಃ ಹೇಳತಕ್ಕ ಆವಶ್ಯಕವಿಲ್ಲ. ಹೆಚ್ಚು ಕಡಮೆ ಸನ್ಯಾಸಾಶ್ರಮವನ್ನವಲಬಿಂಸುವ ಸ್ಥಿತಿಗೆ ಸುಂದರೇಶನು ಬಂದನು. ಬ್ರಹ್ಮಚರ್ಯದಲ್ಲಿದ್ದೇ ಸನ್ಯಾಸಾಶ್ರಮವನ್ನು ವಹಿಸುವುದು, ಅಸಾಧ್ಯವು. ಸನ್ಯಾಸದಲ್ಲ ಮನಸ್ಸುಂಟಾಗ ಬೇಕೆಂದೇ ಪೂರ್ವೀಕ ಋಷಿಗಳು ಸಂಸಾರವನ್ನೇರ್ಪಡಿಸಿರುವಂತೆ ಕಾಣುವುದು. ಅಯ್ಯೋ! ಸನ್ಯಾಸವನ್ನು ಸ್ವೀಕರಿಸಲು ನನ್ನ ಪತ್ನಿಯು ನನಗನುಕೂಲಳಾಗಿಲ್ಲವೆಂಬ ಕಾರಣ ಹೊರ್ತು ಬೇರೆ ಕಾರಣವೇನೂ ಇಲ್ಲವಲ್ಲವೇ! ನನಗಾದರೋ ಸಂಸ್ಕೃತಜ್ಞಾನವಿಲ್ಲ. ನಿಜವನ್ನೇ ಹೇಳುವುದಾದರೆ ನನಗಿನ್ನೂ ಪ್ರಪಂಚಾಭಿಮಾನವು ಬಿಟ್ಟಂತೆ ಕಾಣೆನು. ಈಗಿನ ಕಾಲದ ಕೆಲವು ಕಪಟ ಸನ್ಯಾಸಿಗಳಂತೆ ಯೋಗ್ಯತೆಯಿಲ್ಲದೆಯೂ ನಡತೆಯಿಲ್ಲದೆಯೂ ಇದ್ದುಕೊಂಡು ಕಾಮ, ಮೋಹ, ಅಹಂಕಾರ, ಆತ್ಮಸ್ತುತಿ ಇವುಗಳನ್ನು ಹೊಂದಿ, "ನಮ್ಮನ್ನು ಭಿಕ್ಷೆಗೆ ಹೇಳುವರಿಲ್ಲ, ನಮ್ಮನ್ನು ನಮಸ್ಕರಿಸುವರಿಲ್ಲ." ಎಂದು ಚಿಂತಿಸಿ ಎಲ್ಲರನ್ನೂ ಸ್ತುತಿಸಿ ಕಾಲಕಳೆಯುವುದು ಉಚಿತವಾಗಿ ತೋರುವುದಿಲ್ಲ. ಇದೂ ಅಲ್ಲದೇ ತನ್ನ ಪತ್ನಿಯು ಆರು ತಿಂಗಳ ಗರ್ಭಿಣಿಯಾಗಿರುವದರಿಂದ ಆ ಗರ್ಭದಲ್ಲಿರುವ ಶಿಶುವು ಪುರುಷ ಶಿಶುವಾಗಿ ಜನಿಸಿದರೆ ತನ್ನ ಆನಂದಕ್ಕೆ ಪಾರವೇಇಲ್ಲವೆಂದು ಯೋಚಿಸಿ ಸಮುದ್ರದ ಅಲೆಯಂತೆ ಮೇಲೆ ಮೇಲೆ ಬರುತ್ತಿರುವ ಈ ಯೋಚನೆಗಳನ್ನೆಲ್ಲಾ ಶಚೀಂದ್ರನೊಂದಿಗೆ ಹೇಳಿಹೇಳಿ ಸಾಕಾಗುವನು. ಮೇಲೆ ಹೇಳಿದಂತೆ ದಿನಕಳೆಯುತ್ತಿರಲೊಂದು ದಿನ ಕಲಾಶಾಲೆಯಲ್ಲಿ ಜೊತೆಯ ಹುಡುಗರೊಂದಿಗೆ

ಸಂತೋಷದವಾಗಿ ಮಾತನಾಡುತ್ತಾ ಕಲಾಶಾಲೆಯ ಹುಡುಗರಿಗೆ ಬಂದ ಕಾಗದಗಳನ್ನು ಹಾಕುವುದಕ್ಕೋಸ್ಕರ ಅಲ್ಲಿದ್ದ ಪೆಟ್ಟಿಗೆಯ ಬಳಿ ಬರಲು ಅಲ್ಲೊಂದು ಪತ್ರವಿದ್ದದ್ದನ್ನು ಕಂಡು ಕೈಗೆ ತೆಗೆದುಕೊಂಡು ನೋಡಲು ಇಂದಿರೆಯು ತನಗೆ ಬರೆದಿದ್ದ ಕಾಗದವಾಗಿ ಕಂಡುಬಂದದ್ದರಿಂದ ತನ್ನ ಸ್ನೇಹಿತರ ಇದಿರಿನಲ್ಲಿ ಬಿಚ್ಚಿ ನೋಡಲು ಮನಸ್ಸಿಲ್ಲದವನಾಗಿ ಜೇಬಿನೊಳಗಿಟ್ಟುಕೊಂಡನು. ಕಾಗದವು ಭಾರವಾಗಿದ್ದದ್ದರಿಂದ ಒಳಗೇನು ಸಮಾಚಾರಗಳಡಗಿರುವುದೋ ಎಂದು ಚಿಂತಿಸಿ ಏಕಾಂತ ಸ್ಥಳದಲ್ಲಿ ಪತ್ರವನ್ನು ಬಿಚ್ಚಿ ನೋಡಬೇಕೆಂದು ಅಪೇಕ್ಷಿಸಿ, ಪತ್ರವನ್ನೀಕ್ಷಿಸಲು ಆತುರಗೊಂಡಿದ್ದ ಮನಸ್ಸನ್ನು ಬಿಗಿಹಿಡಿದು ಪತ್ರವನ್ನು ತನ್ನ ಜೇಬಿನಲ್ಲಿಟ್ಟುಕೊಂಡನು.

ಏನು ಮಾಡಿಯಾನು ? ಇಂದಿರೆಯು ಕಾಗದ ಬರೆದದ್ದನ್ನು ಕಂಡು ಪರಮಾನಂದಭರಿತನಾದನು. ತನ್ನನ್ನು ಲಕ್ಷಿಸಿ ಅವಳು ಕಾಗದ ಬರೆದದ್ದನ್ನೂ ಅಂತಹ ಗುಣವತಿಯು ತನಗೆ ಲಭಿಸಲಿಲ್ಲವೆಂಬುದನ್ನೂ ನೆನೆನೆನೆದು ಕರಗಿ ನೀರಾದನು. ಆದ್ದರಿಂದ ಸ್ನೇಹಿತರಿಂದ ಅಪ್ಪಣೆ ಪಡೆದು ಸಮುದ್ರತೀರಕ್ಕೆ ಬಂದು ಅಲ್ಲಿದ್ದ ಶಿಲಾಸನವೊಂದರ ಮೇಲೆ ಕುಳಿತು ಪತ್ರವನ್ನು ತೆರೆದು ಓದಲಾರಂಭಿಸಿದನು. ಆ ಪತ್ರವು ಕೆಳಗೆ ಬರೆದಿರುವಂತೆ ಲಿಖಿಸಲ್ಪಟ್ಟಿತ್ತು.

**ಇಂದಿರೆಯು ಸುಂದರೇಶನಿಗೆ ಬರೆದ ಪತ್ರದ ಸಾರಾಂಶವು:**

ಪ್ರಿಯಬಾಂಧವನಾದ ಸುಂದರೇಶನಿಗೆ ನಿರ್ಭಾಗ್ಯಳಾದ ಇಂದಿರೆಯ ಅನೇಕ ನಮಸ್ಕಾರಗಳು. ಇಲ್ಲಿ ಎಲ್ಲರೂ ಸೌಖ್ಯವಾಗಿರುವರು. ಅಲ್ಲಿ ನಿನ್ನ ಮತ್ತು ನಿನ್ನ ಪತ್ನಿಯ ಕ್ಷೇಮಕ್ಕೆ ಆಗಿಂದಾಗ್ಗೆ ಪತ್ರ ಬರೆಯಬೇಕಾಗಿ ಪ್ರಾರ್ಥಿಸುತ್ತೇನೆ.

ನಿನಗೆ ಪತ್ರ ಬರೆಯಲು ನಾನು ವಹಿಸಿದ ಧೈರ್ಯವನ್ನೂ ಅದರಿಂದುಂಟಾಗುವ ವ್ಯಸನವನ್ನೂ ಪತ್ರದಲ್ಲಿರುವ ತಪ್ಪುಗಳನ್ನೂ ಕ್ಷಮಿಸಬೇಕಾಗಿ ಪ್ರಾರ್ಥಿಸುವೆನು.

ಸುಂದರೇಶ, ನಿನ್ನನ್ನು ಏನೆಂದು ಸಂಬೋಧಿಸಲಿ! ನಿನಗೇನೆಂದು ಪತ್ರ ಬರೆಯಲಿ ? ನನ್ನ ಮಗಳಿಗೆ ವಿವಾಹವೆಂದು ಬರೆಯಲೇ? ನಿನ್ನ ಪತ್ನೀಸಹಿತನಾಗಿ ನನ್ನ ಮನೆಗೆ ಬಂದು ಸ್ವಲ್ಪ ದಿನವಿದ್ದು ಹೋಗೆಂದು ಬರೆಯಲೇ ? ಅಥವಾ ಇನ್ನೇನಾದರೂ ಸಂತೋಷ ಸಮಾಚಾರ ಬರೆಯಲೇ ? ಎಂದು ನಾನು ನಿನ್ನನ್ನು ಕೈಹಿಡಿಯದೆಹೋದೆನೋ ಅಂದೇ ಸುಖಸಂತೋಷಾದಿಗಳನ್ನೆಲ್ಲಾ ತ್ಯಜಿಸಿದೆನೆಂದು ತಿಳಿದೆನು. ನನ್ನ ಸಂಕಲ್ಪವೆಂತಿದ್ದಿತೋ ಈಶ್ವರೇಚ್ಛೆಯೂ ಅದರಂತೆಯೇ ಇದ್ದಿತು. ನೋಡಿದೆಯಾ! ಇನ್ನು ಆ ವಿಷಯವನ್ನು ಸ್ಮರಿಸಿ ಪ್ರಯೋಜನವೇನು? ಈಗ ನಾನು ನಿನಗೆ ಬರೆಯುವುದೆಲ್ಲಾ ನನ್ನ ದೌರ್ಭಾಗ್ಯವನ್ನು ಕುರಿತೇ. ಸುಂದರೇಶ, ನನ್ನ ಕಷ್ಟವು ನಿನಗೆ ತಿಳಿದಿರಬಹುದು. ಇದರೊಂದಿಗೆ ಚಿಕ್ಕಮ್ಮನಾದ ಲೀಲೆಯೂ ಅವಳ ತಾಯಿಯೂ ನನ್ನನ್ನು ಹಿಂಸೆಪಡಿಸುತ್ತಿರುವುದು ಈಶ್ವರನಿಗೆ ಗೋಚರವು. ಎಷ್ಟು ಸಹಿಸಿದರೂ ತಡೆಯಲು ಅಸಾಧ್ಯವಾಗಿದೆ. ಯಾರಿಗಾದರೂ ಹೇಳಿದರೆ ಸ್ವಲ್ಪ ಮಟ್ಟಿಗೆ ತೃಪ್ತಿಯುಂಟಾಗುವದು. ನಿನ್ನ ಹೊರತು ನನಗೆ ಬೇರೆ ಆಪ್ತರಿಲ್ಲದ್ದರಿಂದ ನನ್ನನ್ನು ಪೂರಾ ಅರಿತು ನನ್ನದುಸ್ಥಿತಿಗೆ ಕೊರಗುವನು ನೀನಾದ್ದರಿಂದ ನಿನ್ನಲ್ಲಿ ಮೊರೆಯಿಡಬೇಕೆಂದು ನಿಶ್ಚೈಸಿ ಈ ಪತ್ರವನ್ನು ಬರೆಯಲಾರಂಭಿಸಿದೆನು. ನನ್ನ ದುಃಖಶಾಂತಿಗಾಗಿ ನಿನ್ನನ್ನು ದುಃಖಕ್ಕೀಡುಮಾಡುವೆನು. ಅದಕ್ಕಾಗಿ ನಿನ್ನ ಕ್ಷಮೆ ಬೇಡುವೆನು. ಸುಂದರೇಶ, ನನ್ನ ಕಷ್ಟಪರಂಪರೆಗಳನ್ನು ಬರೆಯಲು ಪ್ರಾರಂಭಿಸುವಾಗಲೇ ನನ್ನ ಕರವು ನಡುಗುತ್ತಿರುವುದು. ಅಯ್ಯೋ! ಸುಮ್ಮನೆ ನಿನಗೆ ನನ್ನ ಕಷ್ಟಗಳನ್ನು ತಿಳಿಸಿ ನಿನ್ನನ್ನು ದುಃಖಿತನನ್ನಾಗಿ ಏಕೆ ಮಾಡಬೇಕೆಂದು ಒಂದುವೇಳೆ ತೋರುವುದು. ಪರಪುರುಷನೊಂದಿಗೆ ಹೇಳಬಹುದೇ ಎಂದು ಮತ್ತೊಂದುವೇಳೆ ತೋರುವುದು. ಯಾರೊಂದಿಗೆ ಹೇಳುವುದು? ಬಾಲ್ಯದಿಂದ ಸಹಚಾರನಾಗಿದ್ದವನು ಹೇಗೆ ಅನ್ಯನಾದಾನುಯೆಂದು ಮತ್ತೊಂದು ವೇಳೆ ತೋರುವುದು. ಸ್ತ್ರೀಯೆಂದೂ ಪುರುಷನೆಂದೂ ಪ್ರತ್ಯೇಕಿಸಿ ಹೇಳುವಷ್ಟು ಅಧಿಕಾರ ತಾನೇ ಎಲ್ಲಿರುವುದು ? ಪುರುಷನೂ ಅಲ್ಲದೆ, ಸ್ತ್ರೀಯೂ ಅಲ್ಲದೆ ನರಪಿಶಾಚದಂತೆ ಅಲೆಯುವ ಜನ್ಮವಲ್ಲವೇ ನನ್ನದು ಎಂದು ಮತ್ತೊಂದು

ವೇಳೆ ತೋರುವುದು. ಆದರೂ ಒಂದರಮೇಲೊಂದಾಗಿ ಬರುತ್ತಿರುವ ಈ ಯೋಚನೆಗಳನ್ನೆಲ್ಲಾ ಮೂಲೆಗೊತ್ತರಿಸಿಟ್ಟು ಒಂದೇ ಮನಸ್ಸಿನಿಂದ ಬರೆಯಲೇಬೇಕೆಂದು ತೀರ್ಮಾನಿಸಿದೆನು. ನನ್ನ ಜನ್ಮವು ಸುಖವಿಲ್ಲದೆ ಕೇವಲ ದುಃಖಸಾಗರವಾಗಿ ಪರಿಣಮಿಸಿರುವದು ನೀನರಿತ ವಿಷಯವೇ. ವಿವಾಹವೆನ್ನುವ ಪದದ ಅರ್ಥವನ್ನೇ ಅರಿಯದ ವಯಸ್ಸಿನಲ್ಲಿ ನನ್ನ ಮನಸ್ಸಿಗೊಪ್ಪದವನೊಬ್ಬನಿಗೆ ನಾನು ಪತ್ನಿಯಾದ ವಿಷಯವು ಸರ್ವರೂ ಅರಿತದ್ದೇ. ಆದರಲ್ಲಾ ಪುರುಷರಿಗೇರ್ಪಟ್ಟಿರುವ ಪುನರ್ವಿವಾಹ ಸ್ವತಂತ್ರ್ಯವೂ ಇಲ್ಲದೆ ನರಳಬೇಕಾಗಿರುವುದು. ನಮ್ಮ ಜೀವಾವಧಿಕಾಲವನ್ನೆಲ್ಲಾ ದುಃಖಕ್ಕೀಡು ಮಾಡಿ ದುಃಖದಲ್ಲೇ ಕಳೆಯೋಣವೆಂದು ಎಷ್ಟೇ ನಿಶ್ಚಯಿಸಿದರೂ, ಒಂದೊಂದುವೇಳೆ ಪತಿಯ ಮರಣಕ್ಕಾಗಿ ದುಃಖಿಸಬೇಕಾಗಿರುವುದು. ಇದರಿಂದ ಮತ್ತೊಬ್ಬನನ್ನು ವಿವಾಹವಾಗಬೇಕೆನ್ನುವುದು ನನ್ನ ಅಭಿಪ್ರಾಯವಲ್ಲ. "ಗಂಡನು ಜೀವಿಸಿದ್ದರೆ ದೂಷಣೆಗೂ ಕಲ್ಮನಸುಳ್ಳ ಕಟುಕರ ಹಿಂಸೆಗೂ ಮಿಕ್ಕ ಕಷ್ಟಗಳಿಗೂ ಸಿಕ್ಕದಿರಬಹುದಲ್ಲವೇ" ಎನ್ನುವ ತೃಪ್ತಿಯೊಂದೇ. ಅಯ್ಯೋ, ಸುಂದರೇಶ, ವಿಧವೆಯರ ಗತಿಯನ್ನೇನೆಂದು ವರ್ಣಿಸಲಿ ! ಎಷ್ಟೆಂದು ಹೇಳಲಿ ! ಎಷ್ಟೇ ಮನಸ್ಥೈರ್ಯದಲ್ಲಿಯೂ ಒಳ್ಳೆಯನಡತೆಯಲ್ಲಿದ್ದರೂಕೂಡ ಅವರು ಯೌವನಕ್ಕಾಗಿ ದೂಷಿಸಲ್ಪಡುತ್ತಿರುವರು. ಬಾಲ್ಯದಲ್ಲಿಯೇ ಆಭರಣಗಳನ್ನೆಲ್ಲಾ ತ್ಯಜಿಸಿ ಸ್ತ್ರೀಯರಿಗೆ ಭೂಷಣಪ್ರಾಯವಾದ ಕೇಶರಾಶಿಗಳನ್ನು ಕೂಡ ತ್ಯಜಿಸಿ ಬಿಳೀಬಟ್ಟೆಗಳನ್ನು ಧರಿಸಬೇಕಂತೆ, ಇಷ್ಟಾಯಿತಲ್ಲಾ. ಇಷ್ಟಕ್ಕೆ ಬಿಟ್ಟಿರೇ? ಇಷ್ಟಕ್ಕೆ ಬಿಡುವರೆ! ಈ ಅಲಂಕಾರಗಳನ್ನೆಲ್ಲಾ ಮಾಡಿಕೊಂಡು ಉಪವಾಸವನ್ನಾಚರಿಸಬೇಕಂತೆ. ಶುಭ ಕಾರ್ಯಗಳು ನಡೆಯುತ್ತಿರುವಬಳಿ ಸೇರಕೂಡದಂತೆ. ಯಾರಾದರೂ ಹೊರಗೆ ಹೊರಡುವಾಗ ಅವರಿದಿರಿಗೆ ಬರಕೂಡದಂತೆ. ಇವರನ್ನು ದೂಷಿಸಲು ಎಲ್ಲರೂ ಸರ್ವಸ್ವಾತಂತ್ರ್ಯವುಂಟಂತೆ. ಪತಿಹೀನೆಯರೇ ಪೂರ್ಣಪಾಪಿಯರಂತೆ. ಅಯ್ಯೋ, ಸುಂದರೇಶ! ಕೇವಲ ನಮ್ಮ ಸಂಕಲ್ಪದಿಂದಾಗದ ಕಾರ್ಯಕ್ಕೆ ನಾವೇ ಬಾಧಸ್ಥರೇ ! ಇಷ್ಟಕ್ಕೇ ಬಿಡುವರೇ? ಇಷ್ಟು ಅಲಂಕಾರಗಳನ್ನು ಏರ್ಪಡಿಸಿ ಕುರೂಪಿಯಾಗಿ ಮಾಡಿ ಆಹಾರವನ್ನು ಕಮ್ಮಿ ಮಾಡುವದರಿಂದ

ಶಕ್ತಿಯನ್ನು ಕಮ್ಮಿಮಾಡಿ ಇತರರಿಗೆ ಮುಖ ತೋರಿಸಲು ಯೋಗ್ಯತೆ ಇಲ್ಲದಂತೆ ಮಾಡಿಯೂ, ತಣೆಬರಹವನ್ನು ನೆನೆದು ನೊಂದುಕೊಂಡಿದ್ದರೂ ಅದನ್ನು ನೋಡಿ ಸಹಿಸಲಾರರು. ಅಯ್ಯೋ! ಈ ಕಷ್ಟಗಳನ್ನು ಅನುಭವಿಸಿರುವರ್ಯಾರು? ಒಂದು ಪುಸ್ತಕವನ್ನೋದಲೂ, ದುಃಖಶಮನಕ್ಕಾಗಿ ಒಬ್ಬಳಾಗಿದ್ದು ಹಾಡಲೂ, ಬೇಕಾದ ಮಿತ್ರರೊಂದಿಗೆ ಉಲ್ಲಾಸವಾಗಿ ಸಂಭಾಷಿಸಲೂ, ಬೇರೆ ವಿನೋದಗಳನ್ನು ನೋಡಲೂ ಕೂಡದಂತೆ. ಸುಂದರೇಶ! ಪತಿಯನ್ನು ಕಿತ್ತುಕೊಂಡ ಪಾಪಿದೈವವು ಕಣ್ಣು, ಆತ್ಮ, ಬುದ್ಧಿ ಇವುಗಳನ್ನು ಕಿತ್ತುಕೊಂಡಿದ್ದರೆ ನಮ್ಮಂತಹ ನಿರ್ಭಾಗ್ಯರ ಕಷ್ಟವು ಬಹುಮಟ್ಟಿಗೆ ಕಮ್ಮಿಯಾಗುತ್ತಿತ್ತು. ಎಲ್ಲಾದರೂ ನೋಡಿದರೆ ಯಾರನ್ನೋ ನೋಡಿದಳೆನ್ನುವರು. ವೀಣೆಯನ್ನು ನುಡಿಸಿದರೆ ಯಾರನ್ನು ಮೆಚ್ಚಿಸಲು ವೀಣೆ ನುಡಿಸುವಳೆನ್ನುವರು. ಓದಿದರೆ ಯಾವ ಕಳ್ಳ ಪುರುಷನಿಗೆ ಪತ್ರ ಬರೆಯಲು ಓದು ಕಲಿಯಬೇಕೆನ್ನುವರು. ಸುಮಂಗಲಿಯಾದ ಸ್ತ್ರೀಯರು ಏನುಮಾಡಿದರೂ ಕೆಡಲಾರರಂತೆ. ಇದರಿಂದ ಪಕ್ಷಪಾತವೆಷ್ಟಿರುವುದೆನ್ನುವುದನ್ನು ನೀನೇ ಊಹಿಸಿಕೋ! ಪತಿಹೀನೆಯರಿಂದ ಕೆಟ್ಟು ಹೋಗದೆ ಇರುವದು ಅಸಾಧ್ಯವಂತೆ. ಈ ಹಾಳು ದೂಷಣೆಗೋಸ್ಕರವಾಗಿಯಾದರೂ ಕುರುಡನೋ, ಕುಂಟನೋ, ಕುರೂಪಿಯೋ, ದುಷ್ಟನೋ ಆದ ಪತಿ ಇದ್ದೇತೀರಬೇಕು ಎಂದು ತಿಳಿಯುವದಿಲ್ಲವೇ? ಇಷ್ಟೊಂದು ಕಷ್ಟಗಳನ್ನವರಿಗೇರ್ಪಡಿಸುವದಕ್ಕಿಂತಲೂ ಅವರನ್ನು ಪತಿಯ ಶವದೊಂದಿಗೆ ಭಸ್ಮಮಾಡಿದರೆ ವಿಧವೆಯರ ಕಷ್ಟವು ಬಹುಮಟ್ಟಿಗೆ ಕಮ್ಮಿಯಾಗುವುದು. ಈ ವಿಷಯವು, ಸಹಗಮನ ಪದ್ಧತಿಯನ್ನು ನಿಲ್ಲಿಸಿದ ಲಾರ್ಡ್ ವಿಲಿಯಂ ಬೆಂಟಿಕ್ ಪ್ರಭುವಿಗೆ ತಿಳಿದಿದ್ದರೆ ಸಹಗಮನವನ್ನು ನಿಲ್ಲಿಸುತ್ತಲೇ ಇರಲಿಲ್ಲ. ಸುಂದರೇಶ, ಇನ್ನೆಷ್ಟೆಂದು ತಾನೇ ನಾನು ವಿವರಿಸಲಿ? ಎಷ್ಟು ಬರೆದರೂ ತೀರದು. ಎಷ್ಟು ಅನುಭವಿಸಿದರೂ ತೀರದು. ಕೆಲಸ ಮಾಡಿದರೇನೆನ್ನುವರೋ ಬೆಳಗಾದರೇನಾಗುವದೋ, ರಾತ್ರಿಯಾದರೇನಾಗುವದೋ, ಯಾವ ಕೆಲಸ ಮಾಡಿದರೇನೆನ್ನುವರೋ ಎಲ್ಲಿಹೋದರೇನೆನ್ನುವರೋ, ಎಂಬ ಚಿಂತೆಯಿಂದಲೂ ಭಯದಿಂದಲೂ ಸದಾತಪಿಸುತ್ತಿರುವದೇ ನಮ್ಮಗಳ

ಬಾಳು. ನಮ್ಮ ಗೋಳು, ನಮ್ಮ ದೌರ್ಭಾಗ್ಯ, ಸುಮ್ಮನೆ ಹೇಳುವುದ ರಿಂದಾಗುವುದೇನು ! ಈ ಕಷ್ಟವು ನನ್ನಂತಹ ಅನುಭವಶಾಲಿಗಳಿಗ ಗೊತ್ತಲ್ಲದೆ ಮಿಕ್ಕವರಿಗೇನು ಗೊತ್ತಿರುವದು!

ಸುಂದರೇಶ ! ಇನ್ನು ನಾನು ಬರೆಯಲುದ್ದೇಶಿಸಿರುವುದನ್ನು ನೆನಸಿಕೊಂಡರ ನನಗೆ ಲಜ್ಜೆಯಾಗುವುದು. ಆದರೂ ಅದನ್ನೇ ನಾನು ಮುಖ್ಯವಾಗಿ ಬರೆಯಬೇಕೆಂದಿರುವದು. ನಾನು ಹೊರಗೆ ಹೋಗುವುದಿಲ್ಲವೆನ್ನುವದೂ ಮನೆಯ ಕೆಲಸಗಳನ್ನೆಲ್ಲಾ ನಾನೇ ಮಾ ಡುತ್ತಿರುವೆನೆನ್ನುವುದೂ ನೀನರಿತ ವಿಷಯವೇ ಅಲ್ಲವೇ ! ಇದಕ್ಕೆ ಫಲವು ನನ್ನ ಚಿಕ್ಕಮ್ಮ, ಅವಳ ತಾಯಿ ಇವರಿಂದ ಹೊಂದುವಪ್ರಹಾ ರಗಳೇ. ಒಂದು ದಿನ ಪ್ರಾತಃಕಾಲದಲ್ಲಿ ಬಾಗಿಲಿಗೆ ನೀರುಹಾಕಿ ರಂಗ ವಲ್ಲಿಯನ್ನು ತೆಗೆಯಲು ಗೂಡಿನ ಬಳಿ ಹೋದೆನು. ಅಲ್ಲಿ ಶಂಕರಿಯು ಮಲಗಿದ್ದಳು. ನನ್ನ ಗ್ರಹಚಾರವಶದಿಂದ ನಾನಲ್ಲಿಗೆ ಹೋದಸಮ ಯವೂ ಶಂಕರಿಯು ಏಳುವ ಸಮಯವೂ ಬಂದೇ ಆಗಿತ್ತು. ಆಗ ತಾನೇ ಎದ್ದ ಶಂಕರಿಯು ನನ್ನನ್ನು ಎಳೆದು ಕೂದಲನ್ನು ಹಿಡಿದು ಕೆಳಗೆ ತಳ್ಳಿ ನನ್ನ ಮುಖವನ್ನು ಏಳುವಾಗ ನೋಡಿದರ ತನಗನ್ನ ಸೇರುವುದಿಲ್ಲವೆಂದು ಹೇಳಿ ನನ್ನನ್ನು ತೃಪ್ತಿಯಾಗುವಷ್ಟು ಹೊಡೆದಳು. ಇದನ್ನು ನೋಡಿದ ತಂದೆಯು ಏನನ್ನೂ ಮಾಡಲಸಮರ್ಥನಾಗಿ ಬೇಗ ಗೆದ್ದು ಹೊರಟು ಹೋದನು. ಅಜೀರ್ಣದಿಂದ ಅನ್ನಸೇರದಿರಬಹುದು. ಇದಕ್ಕೆ ನನ್ನ ಮುಖದರ್ಶನವೇ ಮುಖ್ಯ ಕಾರಣವಂತೆ. ನೋಡಿ ದೆಯಾ !

ಮತ್ತೊಂದು ದಿನ ನಾನು ಹಿತ್ತಲ ಬಾವಿಯಬಳಿ ನೀರಿಯನ್ನೆ ಗೆಯುತ್ತಿದ್ದೆನು. ಆಗ ಶಂಕರಿಯು ಅಕಸ್ಮಾತ್ತಾಗಿ ಅಲ್ಲಿಗೆ ಬಂದು ನನ್ನನ್ನು ದರದರನೆ ಎಳೆದುಕೊಂಡು ಬಂದು ಅಂಗಳದಲ್ಲಿ ನಿಂತು ಕೊಂಡು ಸುಮ್ಮನೆ ಹೊಡೆದಳು. ಹೊಡೆದದ್ದೂ ಅಲ್ಲದೆ ನಾನುಯಾವ ನನ್ನೋ ಕಂಡು ನಕ್ಕೆನೆಂದೂ ಹೇಳಿದಳು. ಈ ಅನ್ಯಾಯ ದೂಷಣೆ ಯನ್ನು ಕೇಳಿ ನಾನು ಮೂರ್ಛೆ ಹೊಂದಿದೆನು. ಸುಂದರೇಶ, ಇದ ನ್ನೆಲ್ಲಾ ಓದಿದ ನಿನಗೆ ದುಃಖ ಉಂಟಾಗಬಹುದು. ಆದರೂ ಏನು ಮಾಡುವದು ? ಎಲ್ಲವೂ ನನ್ನ ದುರಾದೃಷ್ಟ, ದೌರ್ಭಾಗ್ಯ. ನನ್ನ

ಕರ್ಮಕ್ಕೆ ತಕ್ಕ ಫಲವನ್ನು ನಾನನುಭವಿಸುತ್ತಿರುವೆನು. ಇದಕ್ಕಾಗಿ ನೀನು ವ್ಯಥೆಪಡಬೇಡ. ಆಗಲೇ ನನ್ನ ಪ್ರಾಣವನ್ನು ಹೋಗಲಾಡಿಸಿ ಕೊಳ್ಳಬೇಕೆಂದಿದ್ದೆನಾದರೂ ಆತ್ಮಹತ್ಯ ದೋಷಕ್ಕೊಳಗಾಗಬೇಕಲ್ಲಾ ಎಂದು ಸುಮ್ಮನಿದ್ದೆನು. ಈಗ ನಾಲ್ಕು ದಿನಗಳ ಕೆಳಗೆ ಒಂದು ಸಂಭವವು ನಡೆಯಿತು. ಸುಂದರೇಶ, ಅದನ್ನು ಹೇಗೆಬಾಯಿಬಿಟ್ಟು ಹೇಳಲಿ! ನಾನು ಸಾಯಂಕಾಲ ಭಾವಿಯ ಬಳಿ ನೀರನ್ನು ಕೊಡದಲ್ಲಿ ಸೇದಿಟ್ಟು ಸಡಿಲವಾಗಿದ್ದ ಸೀರೆಯ ಗಂಟನ್ನು ಬಿಗಿ ಮಾಡಿಕೊಂಡೆನು. ಸೀರೆಯನ್ನು ಬಿಗಿ ಮಾಡಿಕೊಳ್ಳುವಾಗ ಎಂದಿನಂತೆ ಹಿತ್ತಲಲ್ಲಿ ನಾಲ್ಕು ಕಡೆಯೂ ನೋಡಿದೆನು. ಆಗ ಪಕ್ಕದ ಮನೆ ಹಿತ್ತಲಲ್ಲಿ ಆ ಮನೆಯಲ್ಲಿದ್ದ ಕಾಮಪಾಲನು ನಿಂತಿದ್ದುದನ್ನು ಕಂಡು ಭೀತಿಯಿಂದ ಜಾಗ್ರತೆ ಕೊಡವನ್ನೆತ್ತಿ ಕಂಕುಳಲ್ಲಿಟ್ಟುಕೊಂಡು ಗೃಹಾಭಿಮುಖಳಾದೆನು. ಆಗ ಶಂಕರಿಯು ಒಳಗಿನಿಂದ ಓಡಿಬಂದು ನಾನು ಬರೆದಿಟ್ಟಿದ್ದ ಪತ್ರವೊಂದನ್ನು ಕಾಮಪಾಲನ ಬಳಿ ಎಸೆದದ್ದಾಗಿಯೂ ತನ್ನನ್ನು ನೋಡಿ ಭೀತಳಾಗಿ ನಾನುಜಾಗ್ರತೆ ಬಂದದ್ದಾಗಿಯೂ ಕಾಮಪಾಲನುನನ್ನಿಂದ ಬರೆಯಲ್ಪಟ್ಟ ಪತ್ರವನ್ನು ಓದುತ್ತಿದ್ದದ್ದನ್ನು ತಾನುಕಂಡದ್ದಾಗಿಯೂ ಸಾಧಿಸಿ ಕೂಡಲೇ ನನಗೆ ಶಿರೋಮುಂಡನ ಮಾಡಿಸಿಬಿಡಬೇಕೆಂದೂ, ಬಿಳೀ ಸೀರೆಯನ್ನುಡಿಸಿ ಬಿಡಬೇಕೆಂದೂ; ಮನೆಯಲ್ಲಿಟ್ಟುಕೊಂಡಿದ್ದರೆ ತಮ್ಮ ಕುಲಕ್ಕಪಕೀರ್ತಿ ತರುವಳಾದ್ದರಿಂದ ಮನೆಬಿಟ್ಟೋಡಿಸಿ ಬಿಡಬೇಕೆಂದೂ ಹೇಳಿ ತಾಯಿಯೂ ಮಗಳೂ ತೃಪ್ತಿಯಾಗುವ ಮಟ್ಟಿಗೆ ಹೊಡೆದರು. ಸುಂದರೇಶ, ಈ ಜನ್ಮವನ್ನು ಇನ್ನೂ ಇಟ್ಟುಕೊಂಡಿರಬೇಕೆ ? ಅಷ್ಟಕ್ಕೇ ಬಿಡದೆ ತಂದೆಯ ಕೈಯಿಂದಲೂ ಹೊಡಸಿದರು. ಆ ಪೆಟ್ಟಿನಿಂದುಂಟಾದ ಉಪದ್ರವದಿಂದ ಕೈಕಾಲುಗಳು ಇನ್ನೂ ನೋಯುತ್ತಿರುವವು. ಈ ಕ್ರೂರ ಹಿಂಸೆಗಳನ್ನನುಭವಿಸುವುದಕ್ಕಿಂತಲೂ ಆತ್ಮಹತ್ಯವೇ ಮೇಲೆಂದು ತಿಳಿದು ಅದಕ್ಕೆ ತಕ್ಕ ಸಮಯವನ್ನಿದಿರು ನೋಡುತ್ತಿದ್ದೆನು. ನಿನ್ನೆ ರಾತ್ರಿ ಎಂಟು ಘಂಟೆಗೆ ವೃಷಭವಾಹನವನ್ನು ನೋಡಲು ಎಲ್ಲರೂ ದೇವಸ್ಥಾನಕ್ಕೆ ಹೊರಟು ಹೋದದ್ದರಿಂದ ಮನೆಯಲ್ಲಿ ನಾನೊಬ್ಬಳೇ ಇದ್ದೆನು. ಇದೇ ಆತ್ಮಹತ್ಯಕ್ಕೆ ತಕ್ಕ ಸಮಯವೆಂದೆಣಿಸಿ ದೊಡ್ಡ ನೀರು ಸೇದುವ ಹಗ್ಗವನ್ನು ತಂದು

ಪಚಾರದ ದೂಲಕ್ಕೆ ಕಟ್ಟಿ ತುದಿಗೆ ನೇಣನ್ನು ಬಿಗಿದು ಕುರ್ಚಿಯನ್ನು ತರಲು ಹೋದೆನು. ಆಗ ಬೀದಿಯಲ್ಲಿ ಏನೋ ಸದ್ದಾಯಿತು. ಅದನ್ನು ಲಕ್ಷಿಸದೆ ಕುರ್ಚಿಯನ್ನು ಹಾಕಿ ಅದರ ಮೇಲೆ ನಿಂತು ನೇಣನ್ನು ಕುತ್ತಿಗೆಗೆ ಬಿಗಿಯಲು ಮೊದಲು ಮಾಡಿದೆನೋ ಇಲ್ಲವೋ ಬೀದಿಯ ಬಾಗಿಲನ್ನು ಯಾರೋ ಡಬಡಬ ಎಂದು ಬಡಿದ ಸದ್ದಾಯಿತು. ಸದ್ದನ್ನು ಕೇಳಿ ಯಾರಿಗೋ ಏನೋ ಅಪಾಯ ಉಂಟಾಗಿರುವುದೆಂದರಿತು ಹಗ್ಗವನ್ನು ಕಿತ್ತುಬಿಟ್ಟು ಕುರ್ಚಿಯನ್ನು ಅದರ ಸ್ಥಾನದಲ್ಲಿ ಸೇರಿಸಿ ಬಾಗಿಲನ್ನು ತೆರೆದು ನೋಡಲು ಜನಗಳ ಗುಂಪಾಗಿತ್ತು. ಇಬ್ಬರು ಸೇವಕರು ತಂದೆಯನ್ನು ಎತ್ತಿಕೊಂಡು ಬಂದು ಒಳಗೆ ಮಲಗಿಸಿದರು. ವಿಚಾರಿಸಿದ್ದರಲ್ಲಿ ತಂದೆಯು ಅಕಸ್ಮಾತ್ತಾಗಿ ಮೂರ್ಛಿತನಾಗಿ ಬಿದ್ದನೆಂದೂ ಕೂಡಲೇ ಗಾಡಿಯಲ್ಲಿ ಕರೆದುಕೊಂಡು ಬಂದರೆಂದೂ ತಿಳಿಯಿತು. ಆ ಮೂರ್ಛೆಯು ಅರ್ಧ ಘಂಟೆಗೆಲ್ಲಾ ಮಾಯವಾಗಿ ಈಗ ತಂದೆಯು ಸರಿಯಾದ ದೇಹಸ್ಥಿತಿಯುಳ್ಳವನಾಗಿರುವರು. ಒಂದು ವೇಳೆ ನನ್ನ ಆತ್ಮಹತ್ಯೆಯನ್ನು ತಪ್ಪಿಸುವುದಕ್ಕೋಸ್ಕರವೇ ಈ ಮೂರ್ಛೆಯುಂಟಾಯಿತೇನೋ! ಇನ್ನೂ ಎಷ್ಟೆಷ್ಟು ಕಷ್ಟಗಳನ್ನನುಭವಿಸಬೇಕೋ! ಯಾರ್ಯಾರಿಂದ ಮಾತು ಕೇಳಬೇಕೋ, ನನ್ನ ಹಣೆಯಲ್ಲೇನೇನು ಬರೆದಿರುವುದೋ! ನನ್ನ ಪ್ರಾಣತ್ಯಾಗಕ್ಕೆ ಈಶ್ವರ ಸಮ್ಮತಿಯಿಲ್ಲವೆಂದು ಕಾಣುತ್ತದೆ. ಸುಂದರೇಶಾ! ನಾನೇನು ಮಾಡಲಿ, ಈ ಕಷ್ಟವನ್ನು ನಾನನುಭವಿಸಲಾರೆನಲ್ಲಾ. ಸಾಧಾರಣವಾಗಿ ಅಬಲೆಯರು ಕಷ್ಟಪಟ್ಟರೆ "ದ್ರೌಪದಿ, ಸೀತೆ, ಸಾವಿತ್ರಿ, ದಮಯಂತಿ, ಚಂದ್ರಮತಿ ಮೊದಲಾದವರಂತೆ" ಎಂದು ಹೇಳುವುದುಂಟು. ನನ್ನ ಕಷ್ಟದಂಥಾ ಕಷ್ಟವನ್ನು ದ್ರೌಪದಿಯನುಭವಿಸಿದಳೇ? ಮಾನಭಂಗ ಉಂಟಾಗುವ ಕಾಲದಲ್ಲಿ ಕೃಷ್ಣಪರಮಾತ್ಮನು ಅಕ್ಷಯವಸ್ತ್ರವನ್ನಿತ್ತು ಕಾಪಾಡಿದನು. ಮಿಕ್ಕ ವೇಳೆಯಲ್ಲೆಲ್ಲಾ ಪತಿಯೊಂದಿಗೆ ವಾಸವಾಗಿದ್ದಳು. ಸೀತೆ, ದಮಯಂತಿ ಮೊದಲಾದವರು ಪತಿಯರನ್ನಗಲಿ ಸ್ವಲ್ಪ ದಿನಗಳಿದ್ದರೂ ಪೂರ್ತಿ ನನ್ನಂತೆ ಕಂಡವರಿಂದಲೆಲ್ಲಾ ಮಾತುಗಳನ್ನು ಕೇಳಿ ಪತಿಯನ್ನಗಲಿದ್ದರೇನು? ಅವರ ಕಷ್ಟವು ನನ್ನ ಕಷ್ಟದಂತಹ ತೀರದ ಕಷ್ಟವೂ ಅಲ್ಲ, ದುಃಖವು ನನ್ನ ದುಃಖದಂತೆ ಆರದ ದುಃಖವೂ ಅಲ್ಲ.

ಸುಂದರೇಶ, ನನ್ನಂಥಹ ನಿರ್ಭಾಗ್ಯ ವನಿತೆಯರನ್ನು ಇರುವ ವರು ಆದರಿಸಬೇಕು. ನನಗೆ ಆ ಭಾಗ್ಯವೂ ಇಲ್ಲ. ಆದ್ದರಿಂದ ನನ್ನ ಅಣ್ಣನಾದ ಶಚೀಂದ್ರನಿಗೆ ಹೇಳಿ ನನ್ನನ್ನು ಕೆಲವು ದಿವಸಗಳ ಮಟ್ಟಿಗೆ ಅಲ್ಲಿಗಾದರೂ ಕರಯಿಸಿಕೊಳ್ಳಹೇಳು. ತರುವಾಯ ಅವ ನಿಷ್ಟ. ಇಲ್ಲೇ ಇರಬೇಕಾಗಿ ಒಂದರ ಕೂಡಿದ ಮಟ್ಟಿಗೆ ಶೀಘ್ರದ ಲ್ಲಿಯೇ ನನ್ನ ದುರ್ಮರಣ ವೃತ್ತಾಂತವನ್ನು ಕೇಳುವಿರಿ. ಅಲ್ಲಿಗೆಬಂದರ ನನ್ನ ದುಃಖವು ಸ್ವಲ್ಪಮಟ್ಟಿಗೆ ಕಡಮೆಯಾಗುವುದು. ನಿನ್ನ ಸತಿಯು ಗರ್ಭವನ್ನು ಧರಿಸಿರುವಳೆನ್ನುವುದನ್ನು ಕೇಳಿ ಬಹಳ ಸಂತೋಷವಾ ಯಿತು. ಅವಳ ಮಗುವನ್ನು ಎತ್ತಿಮುದ್ದಾಡುವಷ್ಟು ಪುಣ್ಯವು ನನಗಿ ರುವದೇ? ಎಲ್ಲಕ್ಕೂ ಪರಮಾತ್ಮನಿರುವನು. ಎಲ್ಲರನ್ನೂ ನಾನುಕೇಳಿ ದ್ದಾಗಿ ಹೇಳು. ನನ್ನನ್ನು ಮಾತ್ರ ಮರಯಬೇಡ.

ಹೀಗೆ ನಿನ್ನ ಪ್ರೀತಿಪಾತ್ರಳಾದ,
ಇಂದಿರ.

ಈ ಕಾಗದವನ್ನು ನೋಡಿದ ಸುಂದರೇಶನ ದುಃಖಕ್ಕೆ ಕೊನ ಮೊದಲಿರಲಿಲ್ಲ. ತಾನೇ ಅತ್ತುಅತ್ತು ಬೇಸತ್ತು ಕೊನೆಗೆಮನೆಯನ್ನು ಸೇರಿದನು.

ಹಿಂದೂ ವಿಧವೆಯರ ಶೋಚನೀಯವಾದ ಸ್ಥಿತಿಯುಇಂದಿರಯ ಪತ್ರದಿಂದಲೇ ಬಹು ಮಟ್ಟಿಗೆ ವ್ಯಕ್ತವಾಗುವುದಾದ್ದರಿಂದ ಪುನಃ ಆ ವಿಷಯವನ್ನು ಬರಯತಕ್ಕ ಅವಶ್ಯಕವೇ ಇಲ್ಲ.

---

## ಹತ್ತನೆಯ ಅಧ್ಯಾಯ.

---

### ಸುಂದರೇಶನಿಗೂ. ಶಚೀಂದ್ರನಿಗೂ ನಡೆದ ಸಂಭಾಷಣೆ.

ವಾರಸೇದಿನ ಸಾಯಂಕಾಲದವರಗೂಯಾರಿಗೂಬಾಯಿಬಿಟ್ಟು ಹೇಳದೆ ತನ್ನ ದುಃಖವನ್ನಡಗಿಸಿಕೊಂಡಿದ್ದು ತರುವಾಯ ಶಚೀಂ ದ್ರನು ಕಚೇರಿಯಿಂದ ಮನೆಗೆ ಬರುತ್ತಲು ಅವನನ್ನೂ ಕರೆದುಕೊಂ ಡು ಸಮುದ್ರ ತೀರಕ್ಕೆ ಹೋಗಿ ಯಾರೂ ಇಲ್ಲದ ಸ್ಥಳದಲ್ಲಿ ಕುಳಿತು

ಕೊಂಡಮೇಲೆ ಇಂದಿರೆಯು ತನಗೆ ಬರೆದಿದ್ದ ಪತ್ರವನ್ನು ಕಣ್ಣೀರು ಸುರಿಸುತ್ತಾ ಶಚೀಂದ್ರನ ಕೈಗೆ ಕೊಟ್ಟನು. ಪತ್ರದ ಎರಡು ಮೂರು ಸಾಲುಗಳನ್ನು ಓದುತ್ತಲೇ ಶಚೀಂದ್ರನು ಕಣ್ಣೀರನ್ನುಸುರಿಸಲಾರಂಭಿಸಿದನು. ಸುಂದರೇಶನಿಗಿಂತ ಶಚೀಂದ್ರನು ಎಷ್ಟೋ ಮನೋದೃಢವುಳ್ಳವನಾದ್ದರಿಂದ ಅಡಿಗಡಿಗೆ ತಡೆಯುತ್ತಿರುವ ಕಣ್ಣೀರನ್ನೊರಸಿಕೊಂಡು ಪತ್ರವನ್ನು ಒಂದು ಬಗೆಯಾಗಿ ಓದಿಮುಗಿಸಿದನು. ಇದನ್ನು ಕಂಡ ಸುಂದರೇಶನೂ ಅಳಲಾರಂಭಿಸಿದನು. ಈ ರೀತಿ ಬಹಳ ಹೊತ್ತು ಅತ್ತು ಕೊನೆಗೆ ತಮ್ಮಷ್ಟಕ್ಕೆ ತಾವೇ ಸಂತೈಸಿಕೊಂಡು, ಇಂದಿರೆಯ ಪರಿತಾಪ ಸ್ಥಿತಿಯನ್ನೂ, ಶಂಕರಲಾಲೆ ಇವರ ಕ್ರೂರ ಹಿಂಸೆಗಳನ್ನೂ, ಸತೀಶನ ಗತಿಯನ್ನೂ ಕುರಿತು ಬಹಳ ಹೊತ್ತು ಸಂಭಾಷಿಸಿ ಕೊನೆಗೆ ಸದ್ಯದಲ್ಲಿಯೇ ಇಂದಿರೆಯನ್ನು ಮದರಾಸಿಗೆ ಕರೆದುಕೊಂಡು ಬರುವುದಾಗಿ ತೀರ್ಮಾನಿಸಿಕೊಂಡು ರಾತ್ರಿಒಂಭತ್ತು ಘಂಟೆಗೆ ಮನೆಯನ್ನು ಸೇರಿದರು. ಅಂದಿನಿಂದ ಇಬ್ಬರೂ ಸಂತೋಷವಾಗಿರಲಿಲ್ಲ. ಇದಕ್ಕೆ ಕಾರಣವು ಅವರ ಪತ್ನಿಯರಿಗಾಗಲಿ, ಸ್ನೇಹಿತರಿಗಾಗಲಿ ತಿಳಿಯದು. ಈ ರೀತಿಯಾಗಿ ಎರಡು ತಿಂಗಳುಗಳು ಕಳೆದವು. ಕ್ರಮ ಪ್ರಕಾರ ಎಂಟನೆಯ ತಿಂಗಳಿನಲ್ಲಿ ನಡೆಯ ಬೇಕಾದ ಪುಂಸವನ, ಶ್ರೀಮಂತ ಮೊದಲಾದವುಗಳೆಲ್ಲಾ ನೆರವೇರಿಸಲ್ಪಟ್ಟವು. ಮನುಷ್ಯ ಪ್ರಯತ್ನವು ಒಂದಾದರೆ, ದೈವಯತ್ನವು ಬೇರೊಂದಾಯಿತು. ಸುಂದರೇಶನ ಹೆಂಡತಿಯು ಒಂದು ದಿನ ನಲ್ಲಿಯ ಕೆಳಗೆ ಜಾರಿಬಿದ್ದು ಆಪಟನಿಂದುಂಟಾದ ಪ್ರಸವವೇದನೆಯಿಂದ ಮೃತಶಿಶುವು ಜನಿಸಿತು. ಸುಂದರೇಶನಾಗಲಿ, ಶಚೀಂದ್ರನಾಗಲಿ ಮನೆಯಲ್ಲಿರಲಿಲ್ಲ. ಶಚೀಂದ್ರನ ಹೆಂಡತಿಯು ಇನ್ನೂ ಬಾಲ್ಯ ವಯಸ್ಕಳಾದ್ದರಿಂದಏನೂ ತಿಳಿಯದವಳಾಗಿದ್ದಳು. ಪಕ್ಕದ ಮನೆಯಲ್ಲಿದ್ದ ವಿಧವೆಯೊಬ್ಬಳನ್ನು ಕರೆತಂದು ಚಿಕಿತ್ಸೆ ಮಾಡಹೇಳಿದಳು. ಆಗ ಶಚೀಂದ್ರನೂ ಸುಂದರೇಶನೂ ಮನೆಗೆ ಬಂದರು. ಆಗ ಓಡಿಹೋಗಿ ವೈದ್ಯರನ್ನು ಕರೆತರುವಷ್ಟರಲ್ಲಿಯೇ ಸುಂದರನ ಭಾರ್ಯೆಯೂ ಇಹಲೋಕ ವ್ಯಾಪಾರವನ್ನು ತ್ಯಜಿಸಿದಳು. ಇಬ್ಬರೂ ಚಿಕ್ಕ ವಯಸ್ಸಿನವರು, ಏನೂ ತಿಳಿಯದವರು. ಏನು ಮಾಡಿಯಾರು ? ಹೆಣವನ್ನು ಸುಟ್ಟು ಮಾಡಬೇಕಾದ

ಕೃತ್ಯಗಳನ್ನೆಲ್ಲಾ ಸುಂದರೇಶನು ಮಾಡಿದನು. ಅದು ಮೊದಲು ಸುಂದರೇಶನು ಶಚೀಂದ್ರನ ಮನೆಯಲ್ಲಿಯೇ ಇದ್ದನು.

ಈ ವಿಷಯಗಳು ನಡೆದ ನಾಲ್ಕೈದು ದಿನಗಳು ಕಳೆದನಂತರ ಇಂದಿರೆಯಿಂದ ಸುಂದರೇಶನಿಗೆ ಮತ್ತೊಂದು ಪತ್ರವು ಬಂದಿತು.

ಇಂದಿರೆಯು ಸುಂದರೇಶನಿಗೆ ಬರೆದ ಪತ್ರವು—

ಸುಂದರೇಶನಿಗೆ ಅನೇಕ ನಮಸ್ಕಾರಗಳು. ಮದರಾಸಿನಲ್ಲಿ ನಡೆದ ವಿಷಯಗಳು ಈಗತಾನೇ ನನಗೆ ತಿಳಿದವು. ನಾನನುಭವಿಸುತ್ತಿರುವ ಕಷ್ಟವು ಸಾಲದೆಂದು ಇದೊಂದು ಸಂಭವಿಸಿತೇನೋ. ನಾನು ಆಸೆಪಡದಿದ್ದರೆ ಎಲ್ಲವೂ ಚೆನ್ನಾಗಿರುತ್ತಿತ್ತು. ಪಾಪಿ! ನಾನು ಆಸೆಪಟ್ಟಿದ್ದರಿಂದ ಈ ಗತಿಯಾಯಿತು. ಅಯ್ಯೋ! ಸುಂದರೇಶ, ಭಗವದ್ವಿಲಾಸವನ್ನು ನೋಡಿದೆಯಾ! ಹುಟ್ಟಿದ್ದು ಮೊದಲು ನಿನ್ನನ್ನೇ ಮದುವೆಯಾಗುವೆನೆಂದು ನಂಬಿದ್ದ ನನ್ನನ್ನು ಮತ್ತೊಬ್ಬನಿಗೆ ವಿವಾಹಮಾಡಿ, ಅವನೂ ಗತಿಸಿದನಲ್ಲಾ! ಅದಕ್ಕಾಗಿ ಅಳಲೇ. ಅಥವಾ ನಿನ್ನಿಷ್ಟದಂತೆ ನಡೆಸದೆ ನಿನಗೂ ಬೇರೊಬ್ಬಳನ್ನು ವಿವಾಹಮಾಡಿಸಿದರಲ್ಲ; ಅದಕ್ಕಾಗಿ ಅಳಲೇ. ನಾನೂ ವಿಧವೆಯಾಗಿ, ನೀನೂ ವಿಧುರನಾಗಿ ನಿಂತಿರುವೆವಲ್ಲಾ, ಅದಕ್ಕಾಗಿ ಅಳಲೇ. ಆದರ ನನ್ನಂಥವಳ ಕಷ್ಟ ನಿನಗಿರಲಾರದು. ನೀನು ನನ್ನಂಥಾ ಹೆಂಗಸಾಗಿ ಹುಟ್ಟದೆ ಗಂಡಸಾಗಿ ಹುಟ್ಟಿರುವೆ. ನನ್ನಂತೆ ದುಃಖಸಾಗರದಲ್ಲಿ ತೇಲದೆ, ಬೇರ ವಿವಾಹವನ್ನಾದರೂ ಮಾಡಿಕೊಳ್ಳಬಹುದೆಂದು ವಿಧಿ ಇರುವುದು. ಪರರಿಂದ ದೂಷಿಸಲ್ಪಡದೆ ಸುಖವಾಗಿರಬಹುದು. ಸೌಂದರ್ಯವಂತನೂ, ವಿದ್ಯಾವಂತನು, ನೀತಿವಂತನೂ, ಯವ್ವನವಂತನೂ ಆದ ಸುಂದರೇಶ, ವಿಧುರರಾದರೂ ವಿಧವೆಯರನ್ನು ವರಿಸಬಹುದೆಂಬುವ ವಿಧಿಯಿದ್ದರ.........ಅಯ್ಯೋ! ಸುಂದರೇಶ, ಬಾಯಿಗೆ ಬಂದಂತೆ ನನ್ನ ದುಃಖಾತಿರೇಕದಿಂದ ಬರೆಯುತ್ತಿರುವೆನು. ನನ್ನ ಕಷ್ಟಕ್ಕೆ ಪ್ರಯೋಜನವೆಂದೂ ಕಾಣೆನು.

ಹೀಗೆ ನಿನ್ನ ಪ್ರಿಯವುಳ್ಳ.

**ಇಂದಿರೆ.**

ಈ ಪತ್ರವನ್ನು ಓದಿದ ಸುಂದರೇಶನ ಮನಸ್ಸು ಪಟ್ಟ ಪಾಡನ್ನು ವಾಚಕರೇ ಊಹಿಸಬೇಕಾಗಿರುವುದು. ತರುವಾಯ ಬಹಳ ಹೊತ್ತು ಚಿಂತಿಸುತ್ತಿದ್ದು ಕೊನೆಗೆ ಈ ಪತ್ರವನ್ನೂ ಶಚೀಂದ್ರನಿಗೆ ತೋರಿಸಿದನು. ಇಬ್ಬರೂ ಸೇರಿ ಶಾಸ್ತ್ರಗಳನ್ನೆಲ್ಲಾ ಹುಡುಕಿ ಪ್ರಮಾಣಗಳನ್ನು ಕಂಡು ಇಂದಿರಗೆ ಪುನರ್ವಿವಾಹಮಾಡಿಸಿ ಅವಳ ದುಃಖನಿವಾರಣೆ ಮಾಡಬೇಕೆಂದು ಸಂಕಲ್ಪವುಳ್ಳವರಾದರು.

ಈ ವಿಷಯವು ನಡೆದ ಒಂದು ವಾರದ ಮೇಲೆ ಒಂದುದಿನ ಮದರಾಸ್ ಆಂಡರ್ಸನ್ ಹಾಲ್ (Anderson Hall) ನಲ್ಲಿ ಬೊಂಬಾಯಿನಿಂದ ಬಂದಿದ್ದ ಚಂದ್ರವಾರ್ಕರ್ ಎಂಬುವರು ಸಮಾಜಪರಿಷ್ಕರಣ (Social Reforms) ವಿಷಯವಾಗಿ ಉಪನ್ಯಾಸ ಮಾಡಿದರು. ಇದನ್ನು ಕೇಳಿ ಮನೆಗೆ ಬಂದ ಸುಂದರೇಶ ಶಚೀಂದ್ರರಿಬ್ಬರೂ ಕೆಳಗೆ ಕಂಡಂತೆ ಸಂಭಾಷಿಸಲಾರಂಭಿಸಿದರು,

ಸುಂದರೇಶ:—ಶಚೀಂದ್ರಾ, ನೋಡಿದೆಯಾ, ಈ ರೀತಿಯಾಗಿ. ಇಂಥಹ ಮಹನೀಯರೆಲ್ಲರೂಪ್ರಯತ್ನಪಟ್ಟೂ ಪಾಡುಪಟ್ಟೂ ಪ್ರಯೋಜನವಿಲ್ಲದೇ ಹೋಗುವುದು. ಇದಕ್ಕೆ ಬಾಯಲ್ಲಿ ಮಾತನಾಡುವಂತೆಯೇ ಕೈಯಲ್ಲಿ ಕೆಲಸ ಮಾಡದಿರುವುದೇ ಕಾರಣವಲ್ಲವೆ ?

ಶಚೀಂದ್ರ :—ಹಾಗಲ್ಲ. ಸಮಯ ಬಂದರ, ಎಲ್ಲರೂ ನಡೆಯುವರು. ಜಿ. ಸುಬ್ರಮಣ್ಯಯ್ಯರವರು ನಡೆಸಲಿಲ್ಲವೇ ?

ಸುಂದರೇಶ :—ಅವರೊಬ್ಬರು ಬೇಕಾದರೆ ಹಾಗೆ ಮಾಡಿದರು. ಮಿಕ್ಕವರೆಲ್ಲಾ ಬರೀಬಾಯಿಮಾತಿನಲ್ಲೇ ಸಾಕುಮಾಡುವರೇ ಹೊರತು ಕಾರ್ಯದಲ್ಲೇನೂ ಕಾಣೆ. ಇಷ್ಟು ಹೇಳುತ್ತೀಯಲ್ಲಾ, ನೀನು ನಡೆಸುವೆಯಾ ?

ಶಚೀಂದ್ರ :—ತಡೆಯೇನು; ಅಗತ್ಯ ನಡೆಸುವೆನು.

ಸುಂದರೇಶ :—ಹಾಗಾದರೆ ನಿನ್ನ ಇಂದಿರೆಗೆ ಪುನರ್ವಿವಾಹ ಮಾಡುವೆಯಾ ?

ಶಚೀಂದ್ರ :—ತಡಯೇನು. ವಿವಾಹಕ್ಕೆ ಇಂದಿರೆಯೂ, ಸಮ್ಮತಿಸಿ ವಿವಾಹ ಮಾಡಿಕೊಳ್ಳುವವನೂ ಒಪ್ಪಿದರೆ ಆಕ್ಷೇಪಣೆ ಇಲ್ಲದೆ ಮಾಡಿಬಿಡುವೆನು. ತಂದೆ ಏನು ಹೇಳುವರೋ ?

ಸುಂದರೇಶ :—ನಿನಗೆ ಸಮ್ಮತವುಂಟೋ ? ನಿನ್ನ ತಂದೆಯು ಅವಳನ್ನು ವಿಚಾರಿಸುವುದೇ ಇಲ್ಲವಲ್ಲ.

ಶಚೀಂದ್ರ :—ನನಗೇನೋ ಸಮ್ಮತವೇ. ಇದರ ಅವಳನ್ನು ಮದುವೆಯಾಗುವರ್ಯಾರು ?

ಸುಂದರೇಶ :—ನಾನು ಮಾಡಿಕೊಂಡರೆ.

ಶಚೀಂದ್ರನು ಸುಂದರೇಶನ ಮಾತನ್ನು ಕೇಳಿ ನಕ್ಕನು. ತರುವಾಯ ಮನೆಗೆ ಹೋಗಿ ಇಂದಿರೆಯು ತನಗೆ ಬರೆದಿದ್ದ ಪತ್ರವನ್ನು ಶಚೀಂದ್ರನ ಕೈಗೆ ಕೊಟ್ಟನು. ಶಚೀಂದ್ರನು ಪತ್ರವನ್ನೋದಿ ಇಂದಿರೆಯು ಸುಂದರೇಶನನ್ನು ವರಿಸಲು ಸಮ್ಮತಿಸಿರುವಳೆಂದು ಸುಂದರೇಶನೂ ಸಮ್ಮತಿಸಿರುವುದರಿಂದ ತಾನು ಕೂಡಲೇ ಹೋಗಿ ಇಂದಿರೆಯನ್ನು ಕರೆದುಕೊಂಡುಬಂದು ಎಷ್ಟೇ ಕಷ್ಟಪಟ್ಟಾದರೂ ಇಬ್ಬರಿಗೂ ವಿವಾಹವನ್ನು ನೆರವೇರಿಸಿಯೇ ತೀರಬೇಕೆಂದು ನಿಶ್ಚೈಸಿ ಅಂದಿನಿಂದಲೇ ವಿವಾಹಕ್ಕೆ ತಕ್ಕ ಏರ್ಪಾಡುಗಳನ್ನು ಮಾಡುವುದಾಗಿ ಸಂಕಲ್ಪ ಮಾಡಿಕೊಂಡನು.

---

# ಹನ್ನೊಂದನೆಯ ಅಧ್ಯಾಯ.

---

## ಇಂದಿರೆಯ ಕಷ್ಟವಿಮೋಚನೆ.

ಹಿಂದಿನ ಅಧ್ಯಾಯದಲ್ಲಿ ತೀರ್ಮಾನಿಸಿದ್ದಂತೆಯೇ ಶಚೀಂದ್ರನು ಮುಂದಿನ ರಜಾಕ್ಕೆ ಕಲ್ಲೀಕೋಟೆಗೆ ಹೋಗಿ ಹಿಂತಿರುಗುವಾಗ, ಸುಂದರೇಶನ ಹೆಂಡತಿಯೂ ಕಾಲವಾದದ್ದರಿಂದ, ತಾವು ಕಾರ್ಯಾರ್ಥವಾಗಿ ಹೋಗಿರುವ ಕಾಲದಲ್ಲಿ ತನ್ನ ಪತ್ನಿಯು ಒಬ್ಬಳೇ ಇರಬೇಕಾಗಿರುವುದರಿಂದ ಇಂದಿರೆಯನ್ನು ಕರೆದುಕೊಂಡು ಹೋಗುವುದಕ್ಕೆ ತಂದೆಯ

ಅನುಮತಿಯನ್ನು ಕೇಳಿದನು. ಸತೀಶನು ಸ್ವಲ್ಪ ಅನುಮಾನಿಸಿದನು. ಇದನ್ನು ನೋಡಿದ ಗೌರಿಯು ಹ್ಯಾಗಾದರೂ ಇಂದಿರೆಯನ್ನು ಮನೆ ಬಿಟ್ಟು ಓಡಿಸಿ, ಅವಳಿಂದ ಖರ್ಚಾಗುತ್ತಿರುವ ಹಣವನ್ನು ಉಳಿಸಬೇಕೆಂದೆಣಿಸಿದವಳಾದ್ದರಿಂದ, ಮಗಳನ್ನು ಕಳುಹಿಸಲುಅನುಮಾನಿಸುವ ಅಳಿಯನನ್ನು ನೋಡಿ, "ಚೆನ್ನಾಗಿದೆ! ಇದಕ್ಕೆ ಯೋಚನೆಯೇಕೆ? ಶಚೀಂದ್ರನಹೆಂಡತಿಯು ಇನ್ನೂಅರಿಯದವಳುತಾನೇ. ಆ ಮದ್ರಾಸ್ ಪಟ್ಟಣದಲ್ಲಿ ಹೇಗೆತಾನೇ ಒಂಟಿಯಾಗಿರಬಲ್ಲಳು? ಮಗಳನ್ನು ಕಳುಹಿಸಲು ಹೀಗೆ ಅನುಮಾನಿಸುವಿರಲ್ಲಾ. ಕಂಡವರ ಮನೆಗೇನಾದರೂ ಕಳುಹಿಸುತ್ತೀರಾ? ಅವಳ ಅಣ್ಣನ ಮನೆಗೆ ತಾನೇ ಕಳುಹಿಸುತ್ತೀರಿ. ಅವಳನ್ನು ಕರೆದುಕೊಂಡು ಹೋಗಲು ಅವನಿಗೆ ಬಾಧ್ಯತೆಯಿಲ್ಲವೇ? ಅವಳ ವಿಷಯದಲ್ಲಿ ನಿಮಗಿರುವಷ್ಟು ಶ್ರದ್ಧೆ ಅವನಿಗಿಲ್ಲವೇ? ನಾನು ಹೇಳುವುದನ್ನು ಕೇಳಿಯಾದರೂ ಶಚೀಂದ್ರನೊಂದಿಗೆ ಇಂದಿರೆಯನ್ನು ಕಳುಹಿಸಿ" ಎಂದಳು. ಅತ್ತೆಯ ಕಪಟವಾಕ್ಯವನ್ನು ಕೇಳಿದ ಸತೀಶನು ಏನುತಾನೇಮಾಡಿಯಾನು? ಶಚೀಂದ್ರನೂ ಇಂದಿರೆಯೂ, ಗೌರಿಯ ಕಪಟ ವಾಕ್ಯಗಳನ್ನರಿತವರಾದರೂ, ಹ್ಯಾಗಾದರೂ ಅವರನ್ನು ಬಿಟ್ಟು ನೀಗಿದರೆ ಸಾಕೆಂಬ ಅಭಿಪ್ರಾಯವುಳ್ಳವರಾದ್ದರಿಂದ ಗೌರಿಯ ವಾಕ್ಯಗಳು ತನಗೆ ಸಹಾಯಮಾಡಿದವುಗಳಾಗಿ ತೋರ್ಪಡಿಸಿಕೊಂಡು ಇಂದಿರೆಯನ್ನು ಮದರಾಸಿಗೆ ಕರೆದುಕೊಂಡು ಬಂದುಬಿಟ್ಟನು. ಇವರು ಬರುವ ವಿಷಯವನ್ನು ಪತ್ರದಮುಖಾಂತ್ರವಾಗಿ ಅರಿತಸುಂದರೇಶನು ರೈಲಿಗೆ ಹೋಗಿದ್ದು ಇವರನ್ನು ಎದಿರುಗೊಂಡು ಕರೆದುಕೊಂಡು ಬಂದನು. ಆಗ ಇಂದಿರೆಗೂ, ಸುಂದರೇಶನಿಗೂ ಇದ್ದ ಪರಸ್ಪರ ಅನುರಾಗವನ್ನೂ, ಅವರಿಬ್ಬರೂ ಪುನರ್ವಿವಾಹಿತರಾಗಲು ಸಮ್ಮತಿಸಿರುವುದನ್ನೂ ನೆನೆಸಿಕೊಂಡಾಗ ಅವರ ಮನಸ್ಸಿದ್ದ ರೀತಿಯನ್ನು ಅವರಲ್ಲದೆ ಮತ್ತ್ಯಾರೂ ಅರಿಯಲಾರರು. ಇಂದಿರೆಯ ದೇಹ ಸೌಂದರ್ಯವು ಹೆಚ್ಚಾಗಿದ್ದಾಗ್ಯೂ ಅವಳು ಅನುಭವಿಸಿದ ಕಷ್ಟದಿಂದಲೂ, ಮನೋವ್ಯಾಕುಲದಿಂದಲೂ ಅವಳ ಶರೀರವು ಕೃಶಹೊಂದಿ ಕಾಂತಿಹೀನವಾಗಿದ್ದಿತು. ಸುಂದರೇಶನನ್ನು ಕಂಡ ಕೂಡಲೇ ಇಂದಿರೆಗೆ ಪೂರ್ವದ ಸಂಭವಗಳೆಲ್ಲವೂ ನೆನಪಿಗೆ ಬಂದು ದುಃಖವನ್ನೂ

ಸಂತೋಷವನ್ನೂ ಏಕಕಾಲದಲ್ಲಿ ಉಂಟು ಮಾಡಿದವು. ಆದರೂ ರೈಲ್ವೆ ಸ್ಟೇಷನ್ನಿನಿಂದ (Railway Station) ಮನೆಗೆ ಬರುವವರೆಗೂ ಸುಂದರೇಶನಾಗಲಿ, ಇಂದಿರೆಯಾಗಲಿ ಬಾಯಿಬಿಡಲಿಲ್ಲ. ಇದನ್ನರಿತ ಶಚೀಂದ್ರನೂ ತಾನೂ ಮೌನವ್ರತವನ್ನವಲಂಬಿಸಿದನು.

ಕಲ್ಲಿಕೋಟೆಯಿಂದ ಮದರಾಸಿಗೆಬಂದಕೆಲವು ದಿನಗಳವರೆಗೂ ಇಂದಿರೆಯು-ಗೌರಿಯೂ, ಲೀಲೆಯೂ ತನ್ನನ್ನು ಹಿಂಸಿಸಿದ ರೀತಿಯನ್ನೆಲ್ಲಾ ಒಂದೊಂದಾಗಿ ಹೇಳಿ ಕಣ್ಣೀರು ಸುರಿಸುವುದೂ, ಅವನ್ನು ಕೇಳಿದ ಸುಂದರೇಶನೂ, ಶಚೀಂದ್ರನೂ ದುಃಖಪಡುವುದೂ, ಇದರಲ್ಲಿಯೇ ಕಾಲಕಳೆದರು. ಕೆಲವು ದಿನಗಳಲ್ಲಿ ಇನ್ನೊಂದು ಹಿಂಸೆಯನ್ನು ಇಂದಿರೆಯು ಅನುಭವಿಸುತ್ತಿದ್ದರೂ ಮನೆಯಲ್ಲಿ ನಡೆಯುವ ವಿಷಯಗಳಿಗೆ ಸ್ವಲ್ಪವೂ ಗಮನ ಕೊಡದೆ ಇದ್ದುದಕ್ಕಾಗಿ ಸತೀಶನನ್ನು ನಿಂದಿಸುವರು. ಲೀಲೆ, ಗೌರಿ ಇವರಕಾಠಿಣ್ಯವನ್ನು ಕೇಳಿ ವ್ಯಥೆಪಡುವರು. ಎಷ್ಟು ಮಾಡಿದರೂ, ಹೇಳಿದರೂ ತಾನೇ ಪ್ರಯೋಜನವೇನು ! ಹ್ಯಾಗಾದರೂ ಈ ಕಷ್ಟಪರಂಪರೆಗಳಿಂದ ಇಂದಿರೆಗೆ ಬಿಡುಗಡೆಯಾಯಿತಲ್ಲಾ ಎಂದು ಮನಸ್ಸಮಾಧಾನ ಹೊಂದುವರು. ಕಳೆದದ್ದೆಲ್ಲಾ ಹೋಗಲಿ. ಇನ್ನು ಇಂದಿರೆಯನ್ನು ಸಂತೋಷಗೊಳಿಸುವುದೇ ತಮ್ಮ ಮುಖ್ಯ ಕರ್ತವ್ಯವೆಂದು ಇಬ್ಬರೂ ಸಂಕಲ್ಪಮಾಡಿಕೊಂಡರು. ರೂಪವೂ ವಿವೇಕವೂ ವಿನಯವೂ ಪೂರ್ಣವಾಗಿ ಮಿಳಿತವಾಗಿರುವ ಹದಿನಾಲ್ಕು ವರ್ಷದ ಈ ನಿರ್ಭಾಗ್ಯವನಿತೆಯನ್ನು ನೋಡಿದರೆ ಯಾರ ಹೃದಯ ತಾನೇ ಕರಗದಿರದು ? ಪಿತೃಪಿಗಳಾದ ಶಚೀಂದ್ರನೂ, ಸುಂದರೇಶನೂ ಇವಳ ಸಂರಕ್ಷಣೆಯಲ್ಲಿ ಬದ್ಧಕಂಕಣರಾಗಿರುವಾಗ ಇಂದಿರೆಗೆ ಯಾರ ಭಯವೂ ಇಲ್ಲ. ವಿದ್ಯೆಯಿಂದ ಅವಳಿಗೆಷ್ಟು ದುಃಖನಿವಾರಣೆ ಮಾಡಬಹುದೋ ಅಷ್ಟನ್ನೂ ಮೊದಲು ಮಾಡಬೇಕೆಂದುದ್ದೇಶಿಸಿ ಅವಳಿಗೆ ಎಷ್ಟರ ಮಟ್ಟಿಗೆ ವಿವೇಕವಿರುವುದೆಂಬುದನ್ನು ಪರೀಕ್ಷಿಸಿ ಅವಳು ಕಾಳಿದಾಸನೇ ಮೊದಲಾದ ಕವಿವರ್ಯರಿಂದ ವಿರಚಿತವಾದ ಕಾವ್ಯಗಳನ್ನು ಓದಿರುವುದನ್ನು ಕಂಡು, ಇನ್ನು ಮೇಲೆ ಅವಳಿಗೆ ಅಭ್ಯಾಸಮಾಡಿಸತೊಡಗಿದರು. ಕೆಲವು ದಿನಗಳ ನಂತರ

ಅವಳು ಪುನರ್ವಿವಾಹದಲ್ಲಿ ಮನಸ್ಸುಳ್ಳವಳಾಗಿರುವಳೆಂಬುದನ್ನೂ, ಸುಂದರೇಶನನ್ನು ವರಿಸಲು ಇಷ್ಟವುಳ್ಳವಳಾಗಿರುವಳೆಂಬುದನ್ನೂ ಅರಿತು ತಾವು ಹಿಂದೆ ಉದ್ದೇಶಿಸಿದ್ದಂತೆಯೇ ತಮ್ಮ ಸಂಕಲ್ಪದಂತೆ ನಡೆಸುವುದಾಗಿ ತೀರ್ಮಾನಿಸಿದರು.

ಮೇಲೆ ಹೇಳಿದ ವಿಷಯಗಳು ನಡೆದು ಆರುತಿಂಗಳುಗಳಾದವು. ಒಂದುದಿನ ಇಂದಿರೆಯೂ ಶಚೀಂದ್ರ ಮತ್ತು ಸುಂದರೇಶ ಇವರೊಂದಿಗೆ ಕಂಬರಾಮಾಯಣವನ್ನು ಓದುತ್ತಿದ್ದಾಗ ಶಚೀಂದ್ರನು ಅದರಲ್ಲಿದ್ದ ಒಂದು ಶ್ಲೋಕದ ಅರ್ಥವನ್ನು ಕೇಳಲು ಇಂದಿರೆಯು ಸಕಾರಣವಾಗಿ ಅದರ ಅರ್ಥವನ್ನು ವಿವರಿಸಲು ಕಂಡು ಮಿತ್ರರಿಬ್ಬರೂ ಪರಮಾನಂದ ಭರಿತರಾದರು. ಶಚೀಂದ್ರನು ತನ್ನಲ್ಲಿ ತಾನೇ "ಆಹಾ! ಇಷ್ಟೊಂದು ವಿದ್ಯಾವೈಭವವಿಂದಿರುವ ಇಂದಿರೆಯ ಗತಿಯೇ ವಿದ್ಯಾಹೀನರ ಕಾಠಿಣ್ಯ ದಿಂದ ನಶಿಸುವುದು. ಕೂಡದು! ಕೂಡದು!! ಎಷ್ಟೇಕಷ್ಟ ಬಂದರೂ ಬರಲಿ. ಇವಳಿಗೆ ಪುನರ್ವಿವಾಹ ಮಾಡಿಯೇ ತೀರಬೇಕು. ಒಳ್ಳೇ ವೇಳೆ. ಸುಂದರೇಶನೂ ವಿವಾಹಕ್ಕೆ ಸಮ್ಮತಿಸಿರುವನು. ಅವನಿಗಿಂತ ಯೋಗ್ಯನಾದ ವರನು ದೊರಕುವುದು ದುರ್ಲಭವು. ಆದುದರಿಂದ ಜಾಗ್ರತೆ ವಿವಾಹವನ್ನು ನೆರವೇರಿಸಬೇಕು" ಎಂದು ತೀರ್ಮಾನಿಸಿ, ಇಂದಿರೆಯನ್ನು ನೋಡಿ, "ಸೋದರಿ! ನೀನು ಈಗ ಹೇಳಿದಶ್ಲೋಕಾ ರ್ಥವು ಬಹಳ ಸ್ವಾರಸ್ಯವಾಗಿರುವುದು. ಕಂಬ ಮಹಾಕವಿಗೆಕೂಡ ನಿನ್ನ ಬುದ್ಧಿಗೆ ತೋರಿದಷ್ಟು ತೋರಿರಲಾರದು" ಎಂದು ಹೇಳಿ, ಸ್ತ್ರೀಯರಿಗೆ ವಿದ್ಯಾಭ್ಯಾಸವು ಕೂಡದೆನ್ನುವರೆಲ್ಲಾ ಇಂದಿರೆಯನ್ನು ನೋಡಿದರೆ ಅವರಸಂಕಲ್ಪವನ್ನು ಬಿಡುವರೆಂದೂ, ಈರೀತಿಸ್ತ್ರೀಯರು ವಿದ್ಯಾವತಿಯರಾದರೆ ಪುರುಷರಿಗೆ ಮಿಂಚಿಹೋಗುವರೆನ್ನುವ ಭೀತಿ ಯಿಂದಲೇ ಸ್ತ್ರೀ ವಿದ್ಯಾಭ್ಯಾಸಕ್ಕೆ ಅಡ್ಡಿಮಾಡುವರೇನೋ ಎಂದೆಣಿಸಿ ತನ್ನ ಕಾರ್ಯದಕಡೆಲಕ್ಷ್ಯಕೊಡಲಾರಂಭಿಸಿದನು.

ಮತ್ತೊಂದು ದಿನ ಸುಂದರೇಶನೂ ಜೊತೆ ಅನೇಕ ವಿಷಯಗಳ ನ್ನುಕುರಿತು ಸಂಭಾಷಿಸುತ್ತಿರುವಾಗ ಶಚೀಂದ್ರನುಸುಂದರೇಶನನ್ನು ನೋಡಿ,, "ಸುಂದರೇಶ, ಆ ದಿನ ಹೇಳಿದ್ದು ಅಂದಿಗೇ ಹೋಯಿತೇ?

ಪುನಃ ಆ ಪ್ರಸ್ತಾಪವೇ ಇಲ್ಲವಲ್ಲಾ" ಎಂದು ಕೇಳಿದನು. ತರುವಾಯ ಸುಂದರೇಶನಿಗೂ ಶಚೀಂದ್ರನಿಗೂ ಕೆಳಗೆ ಕಂಡುಬರುವಂತೆ ಸಂಭಾಷಣೆಯು ನಡೆಯಿತು.

ಸುಂದರೇಶ :—ಏನು ?

ಶಚೀಂದ್ರ :—ಇಂದಿರೆಯ ವಿಷಯ,

ಸುಂದರೇಶ:—ಏನು ; ಅದಕ್ಕೇನು !

ಶಚೀಂದ್ರ :—ಅಂದಿನ ಮಾತು ಅಂದಿಗೇ ಹೋಯಿತೇನು ? ಪುನಃ ಅದರ ಪ್ರಸ್ತಾಪವೇ ಇಲ್ಲವಲ್ಲಾ ? ಎಂದು ಕೇಳಿದನು.

ಸುಂದರೇಶ :—ಪ್ರಸ್ತಾಪವಿಲ್ಲದೆ ಏನು. ನೀನು ಏನೂ ಹೇಳಲ್ಲವಲ್ಲಾ ? ಆದುದರಿಂದ ನಿನ್ನ ಮನಸ್ಸು ಇನ್ನೂ ಧೃಢಪಡಲಿಲ್ಲವೇನೋ ಎಂದು ಸುಮ್ಮನಿದ್ದೆನು.

ಶಚೀಂದ್ರ :—ಧೃಢಪಡದೆ ಏನು ? ಆಹಾ ! ಇನ್ನೊಂದು ಆವಶ್ಯಕವೂ ಮುಖ್ಯವೂ ಆದ ಕಾರ್ಯದಲ್ಲಿ ನಮ್ಮ ದೇಶೀಯರು ದೃಷ್ಟಿ ತೋರಿಸದೆ ಅಲಕ್ಷ್ಯ ಮಾಡುತ್ತಿರುವರಲ್ಲಾ ! ಎಂದು ಪರಿತಾಪವಾಗಿದೆ. ಈ ಸ್ಥಿತಿಯಲ್ಲಿ ಈ ಸರ್ವೋತ್ತಮವಾದ ಕಾರ್ಯವನ್ನು ನಾವು ಮಾಡಿದರೆ, ನಾವೇನೋ ಮಾಡಬಾರದ ಕೆಲಸವನ್ನು ಮಾಡಿದೆವೆಂದು ನಮ್ಮನ್ನು ಜನಗಳು ದೂಷಿಸುವರಲ್ಲಾ ! ಎಂದು ಮನಸ್ಸು ಹಿಂತೆಗೆಯುತ್ತಿರುವುದು.

ಸುಂದರೇಶ :—ಅದಕ್ಕೇನು ಮಾಡುವುದು ! ಯಾವ ಕಾರ್ಯವನ್ನೂ ದೀರ್ಘವಾಗಿ ಯೋಚಿಸಿ ನೋಡಿ, ಆಧಾರಗಳಮೇಲೆ ಮಾಡಬೇಕು. ಮಾಡಬಹುದೆಂದು ನಿರಾಧಾರಗಳ ಮೂಲಕ ನಂಬಿಕೆ ಹುಟ್ಟಿದರೆ ಪುನಃ ಅದರಿಂದೇನು ಕಷ್ಟ ಬಂದರೂ ಬಿಡದೆ ಮಾಡಿಯೇ ತೀರಬೇಕು. ಇಲ್ಲ ನೋಡು! ಜಿ. ಸುಬ್ರಮಣ್ಯಅಯ್ಯರ್, ಚಂದ್ರಾವಾರ್ಕರ್, (Sir N. G. Chandravakar) ವೀರೇಶಲಿಂಗಂ ಪಂತುಲು (K. Veeresa Lingam Pantulu) ಇನ್ನೂ ಅನೇಕಾನೇಕ ಮಹಾ ಪುರುಷರುಗಳು, ನಿರ್ಭಾಗ್ಯರಾದ ವಿಧವೆಯರ ದುಃಖಸ್ಥಿತಿಯ

ನ್ನುಕೆಂಡು ಮುರುಗಿ, ಅನೇಕ ಆಧಾರಗಳನ್ನೂ ಪರಿಶೋಧಿಸಿ, ದೀರ್ಘವಾಗಿ ವಿಚಾರಿಸಿರುವರು. ಮ|| ರಾ|| ಜಿ. ಸುಬ್ರಮಣ್ಯಅಯ್ಯರ್. (G. Subramanaya Iyer) ಅವರು ಅನೇಕರೊಂದಿಗೆ ಕಲೆತು ಯೋಚಿಸಿಯೇ ವಿಧವೆಯಾದ ತನ್ನ ಪುತ್ರಿಗೆ ಪುನರ್ವಿವಾಹವನ್ನು ಮಾಡಿರುವರು. ಎಲ್ಲರೂ ಅವರಿಗೆ ಬಹಿಷ್ಕಾರ ಹಾಕಿದರು. ಅನೇಕ ವಿಧವಾದ ಸಂಸಾರ ತಾಪತ್ರಯಗಳನ್ನೂ ಜನನಿಂದೆಯನ್ನೂ ಸಹಿಸಿ ತಾನೇ ಮಾಡಿದ ಕಾರ್ಯವು ಶಾಸ್ತ್ರಸಮ್ಮತವೂ ದೈವಸಮ್ಮತವೂ ಆದದ್ದೆಂದೂ ತಿಳಿದು ಧೈರ್ಯದಿಂದಲೂ ಉತ್ಸಾಹದಿಂದಲೂ ಇದ್ದರಲ್ಲವೇ? ಇನ್ನೆಷ್ಟು ಜನ ಮಹನೀಯರು ಈ ರೀತಿ ಇಲ್ಲ. ಅವರಂತಲ್ಲವೇ ನಾವಿರಬೇಕು.

ಶಚೀಂದ್ರ:—ಹೌದಪ್ಪಾ, ಎಂತೆಂಥಾವರೋ, ಎಷ್ಟೆಷ್ಟೋ ಜನ ಮಹನೀಯರಿರುವಾಗ, ಅವರುಗಳೆಲ್ಲರೂ ಮಾಡದ ಕಾರ್ಯವನ್ನು ಇವರೇಕೆ ಇಷ್ಟು ಸಂಭ್ರಮದಿಂದ ಮಾಡಬೇಕು! ನೋಡು ರಾನಡೇ, ಚಂದ್ರವಾರ್ಕರ್, ದಿವಾನ್ ಬಹದ್ದೂರ್ ಆರ್. ರಘುನಾಥ ರಾವ್ ಮೊದಲಾದವರು ಹೀಗೆ ಮಾಡಿದರೇ? ಅವರು ಇಷ್ಟೊ ನಮ್ಮ ಸಮೂಹವನ್ನೂ ಸಮೂಹದವರನ್ನೂ ಧೈರ್ಯಗೊಳಿಸಿ ತರುವಾಯ ಸರ್ವಜನ ಸಮ್ಮತವಾದ ನಂತರ ಮಾಡಿದರು, ಅಲ್ಲವೇ?

ಸುಂದರೇಶ:—ಶಚೀಂದ್ರ! ನಾನು ಆ ದಿನವೇ ಹೇಳಿದನಲ್ಲ. ನೀವುಗಳೆಲ್ಲರೂ ಬಾಯಿ ಮಾತಿನಲ್ಲಿ ಸಂಘಪರಿಷ್ಕರಣಾದವರೇ ಅಲ್ಲದೇ ಕಾರ್ಯಾರ್ಥಿಗಳಲ್ಲವೆಂದು. ಯಾವ ಕಾಲದಲ್ಲಾಗಲೀ ಯಾವ ಹೊಸ ಪರಿಷ್ಕರಣವಾಗಲಿ, ಸರ್ವಜನ ಸಮ್ಮತವಾಗಿ ಎಲ್ಲರೂ ಒರದು ಸೇರಿ ಒಡಂಬಡಿಕೆಯಲ್ಲಿ ಕೈಬರಹ ಹಾಕಿ ನಡೆಸಿರುವುದನ್ನು ಕೇಳಿರುವೆಯಾ? ಎಲ್ಲೆಲ್ಲಿಯೂ, ಯಾವ ಕಾಲದಲ್ಲಿಯೂ "ಪದ್ಧತಿ ಪದ್ಧತಿ," ಎನ್ನುವ ಸರ್ಪದ ಬಾಯಿಗೆ ಬೀಳದವರಿಲ್ಲ. ಆ ಸರ್ಪವಿಂದ ತಪ್ಪಲು ಸರ್ವರೂ ಒಂದಾಗಿ ಸೇರಿ ಆ ಸರ್ಪದ ಬಾಯಮೇಲ್ಗಡೆ ಕೆಲವರೂ ಕೆಳಗಡೆ ಕೆಲವರೂ ಎಳೆದರೂ ತಪ್ಪುವುದೆನ್ನುವುದು ಸಾಧ್ಯವು. ಸಿಕ್ಕಿದವರು ಸಿಕ್ಕಿದಹಾಗೆ ದವಡೆಯಿಂದ ಕೆಲವರೂ,

ವಲ್ಲು ಸಂದಿಯಿಂದ ಕೆಲವರೂ, ತಪ್ಪಿಸಿಕೊಳ್ಳಬೇಕು. ಈ ರೀತಿ
ಯಾಗಿ ಸರ್ಪದ ಬಾಯಿಂದ ತಪ್ಪಿಸಿಕೊಂಡವರು ತಮ್ಮ ಪೂರ್ಣಬಲ
ದಿಂದ ಆ ಸರ್ಪವನ್ನು ನಾಶಪಡಿಸಿ ಇತರರನ್ನು ಸರ್ಪದ ಬಾಯಿಂದ
ಬಿಡಿಸಬೇಕು. ಸರ್ಪದ ಬಾಯಲ್ಲಿ ಸಿಕ್ಕಿರುವವರಿಗೆ ಆ ಕಷ್ಟವು ತಿಳಿ
ಯಲಾರದು. ಬಾಯಿಂದ ತಪ್ಪಿಸಿಕೊಂಡವರು ಅನ್ಯಾಯವಾಗಿ
ಕೆಟ್ಟುಹೋದರೆಂದೇ ಹೇಳುವರು. ಆದರಂತೆಯೇ ಪುರಾತನ ಪದ್ಧ
ತಿಯಿಂದ ಮೊದಲು ಪಾರಾಗುವರು ಕೊಂಚಮಂದಿಯೇ, ಆವರು
ಕೆಲವು ದೇಶದಲ್ಲಿ ಖೂನಿಯಾಗಿಯೂ, ಕೆಲವು ದೇಶದಲ್ಲಿಸೆರೆಸಿಕ್ಕಿಯೂ
ಇರುವರು. ಅವರೇ ಕೊನೆಗೆ ದೇವತೆಗಳಾಗಿ ಭಾವಿಸಲ್ಪಟ್ಟಿರು
ವರು. ಈ ವಿಷಯವು ಪ್ರತಿಯೊಂದು ದೇಶದ ಚರಿತ್ರೆಯಲ್ಲಿಯೂ
ಇರುವುದು. ಆದರಲ್ಲೂಪದ್ಧತಿಯೇ ನಿಬಂಧನೆಯಾಗಿರುವ ಈಹಿಂದೂ
ದೇಶದಲ್ಲಿ ಕೇಳಬೇಕೇ ? ಇಲ್ಲಿ ಒಬ್ಬೊಬ್ಬರೇ ಜನರ ನಿಂದನೆಯನ್ನು
ಲಕ್ಷಿಸದೆ ಏನಾದರೂ ಮಾಡಿದರ ಕಲ್ಲಿನಿಂದ ಕೂಡ ಹೊಡೆಯಲ್ಪಡು
ವರು. ಆದರೆ ಕಲ್ಲಿನಿಂದ ಹೊಡೆಯಲ್ಪಟ್ಟರೂ ಕಾಲಕ್ರಮದಲ್ಲಿ ನಮ್ಮ
ಜನಗಳು ಸುಖವನ್ನನುಭವಿಸುವರು. ಇದಕ್ಕೆ ಈಗ ಕಲ್ಲಿನಿಂದ ಹೊಡ
ಸಿಕೊಳ್ಳಲ್ಪಡುವರೇ ಕಾರಣ ಭೂತರಾಗುವರು. ಆಗ ಇವರುಗಳೆ
ಲ್ಲರೂ ಪೂಜಿಸಲ್ಪಡುವರೆನ್ನುವುದರಲ್ಲಿ ಸಂಶಯವೇ ಇಲ್ಲ. ಇಂಥವ
ರಲ್ಲಿ ಗೋಕುಲೆ, ರಾನಡೇ, ಜಿ. ಸುಬ್ರಮಣ್ಯಅಯ್ಯರ್ ಮೊದಲಾದ
ಮಹಾ ಪುರುಷರು ದೇವತಾಸ್ವರೂಪವಾಗಿ ಪೂಜಿಸಲ್ಪಡುವರು.
ಇನ್ನು ಇವರುಗಳು ಇಷ್ಟು ದುರಿತವಾಗಿ ಮಾಡಿದ್ದಕ್ಕೆ ಮತ್ತೊಂದು
ಕಾರಣವೂ ಉಂಟು. ಅದೇನಂದರೆ, ತಾವು ಎಷ್ಟೇ ನಿಜವಾಗಿಯೂ
ಸಂಘಪರಿಷ್ಕರಣಕ್ಕೆ ತನ್ನ ಪ್ರಾಣವನ್ನೇ ಅರ್ಪಿಸತಕ್ಕವರಾದಾಗ್ಯೂ,
ಅವರಿಗೆ ಆ ಕಷ್ಟವು ಸ್ವಾನುಭವಕ್ಕೆ ಬಂದ ಹೊರ್ತು ಮಾಡಿಯೇ
ತೀರಬೇಕೆನ್ನುವ ಆತುರ ಉಂಟಾಗುವುದಿಲ್ಲ. ಸುಮ್ಮನೆ ಬರೀ ಬಾಯಿ
ಮಾತಿನಲ್ಲಿಯೇ ಸಮಾಪ್ತಿಗೊಳಿಸುವರೇ ವಿನಃ ಕಾರ್ಯತಃ ನಡೆಸಲಾ
ರರು. ಸಂಘ ಪರಿಷ್ಕರಣಗಳಿಗೆ (Social Reforms) ವಿರೋಧಿ
ಗಳಾಗಿರತಕ್ಕವರೂ ಕೂಡ, ಅಂಥಾ ಕಷ್ಟವನ್ನು ತಾವೇಅನುಭವಿಸು
ವಾಗ ಇಂಥಾ ಬದಲಾವಣೆಯು ಅತ್ಯಾವಶ್ಯಕವೇಯೆಂದು ಭಾವಿಸಿ

ಕೊಳ್ಳುವರು. ಅವರಿಗೆ ಮನೋಧೈರ್ಯವೂ, ಮನುಷ್ಯಸಹಾಯವೂ ಕರುಣೆಯೂ ಮಾತ್ರವಿದ್ದರೆ ಆ ಕಾರ್ಯವನ್ನು ಆಗಲೇ ಮಾಡಿ ಪೂರೈಸುವರು. ಇಷ್ಟೊಂದು ಸಾಧಕಗಳನ್ನು ಹೊಂದಿ, ತನ್ನ ದೇಶದ ಜನರಿಗಾಗಿಯೇ ತನುಮನಗಳನ್ನು ಧಾರೆಯೆರೆಯುವುದರಲ್ಲಿ ದೃಢ ಮನಸ್ಸೂ, ಸಂಘಪರಿಷ್ಕರಣದಲ್ಲಿ ಆಸಕ್ತಿಯೂ ಉಳ್ಳ ಜಿ. ಸುಬ್ರಹ್ಮಣ್ಯ ಅಯ್ಯರ್ ಮಾಡಿದರು. ತನ್ನ ಉದರದಲ್ಲಿ ಜನಿಸಿದ ಕನ್ನಿಕೆಯು ವಿಧವೆಯಾಗಿ ಲೋಕಸುಖದಿಂದ ವಂಚಿತಳಾಗಿ, ಜೀವಿತಕಾಲವನ್ನೆಲ್ಲಾ ದುಃಖದಲ್ಲಿಯೇ ಕಳೆಯುತ್ತಿರುವುದನ್ನು ಕಂಡು ಯಾರು ತಾನೇ ಸುಖವಾಗಿ ಬಾಳಲು ಸಮ್ಮತಿಸುವರು ! ಆದುದರಿಂದ ಅವರು ಮಾಡಿದ್ದು ಯುಕ್ತವಲ್ಲವೆಂದು ಹೇಳುವವನು ಸಮುದ್ರದಲ್ಲಿ ಅಲೆ ಏರುವುದು ನಿಂತನಂತರ ಸ್ನಾನಮಾಡಲು ಕಾದಿರುವ ಮೂರ್ಖನಂತಾಗುವನು.

ಶಚೀಂದ್ರ:—ಹೌದಪ್ಪಾ. ನೀನು ಹೇಳುವುದು ಯಥಾರ್ಥವೇ. ಇಂದಿರೆಯೊಬ್ಬಳ ದುಃಖವನ್ನು ನೋಡಿದ ಮಾತ್ರಕ್ಕೇ ನಮಗಿಷ್ಟು ವೀರಾವೇಶವುಂಟಾಗುವುದಲ್ಲಾ. ಲಕ್ಷೋಪಲಕ್ಷ ವಿಧವೆಯರನ್ನು ಒಟ್ಟುಗೂಡಿಸಿ ನೋಡಿದರೆ ನಮಗೆ ಆಗ ಯುಕ್ತಾಯುಕ್ತ ವಿವೇಚನೆಯಿರುವುದೇ ! ಇಂದಿರೆಯ ಕಷ್ಟಸ್ಥಿತಿಯನ್ನರಿತ ನಮಗೆ ಅವಳಿಗೇಕೆ ವಿವಾಹ ಮಾಡಬಾರದೆಂದು ತೋರುವುದಲ್ಲಾ. ಇಷ್ಟೊಂದು ಜನ ನಿರ್ಭಾಗ್ಯವನಿತೆಯರನ್ನು ನೋಡಿ ನಾವು ನಮ್ಮ ಹೊಟ್ಟೆ ಹಿಡಿಯುವೆವೇ ? ಒಳ್ಳೆಯದು. ಸುಬ್ರಹ್ಮಣ್ಯ ಅಯ್ಯರವರು ಪುನರ್ವಿವಾಹಕ್ಕೆ ಆಧಾರಗಳನ್ನು ಹುಡುಕಿ ತಿಳಿದುಕೊಂಡರೆಂದು ಹೇಳಿದೆಯಲ್ಲಾ; ಆ ಆಧಾರಗಳನ್ನು ನೀನು ಬಲ್ಲೆಯಾ !

ಸುಂದರೇಶ:—ಇಲ್ಲಿ ನೋಡು. ಆ ಆಧಾರಗಳನ್ನು ತೋರಿಸುವೆನು. ಎಂದು ಒಳಕ್ಕೆ ಎದ್ದು ಹೋಗಿ "ವಿವಾಹ ವಿಧಿಗಳನ್ನು ಬೋಧಿಸುವ ಆರ್ಯಧರ್ಮಶಾಸ್ತ್ರ" ಎನ್ನುವ ಹೆಸರುಳ್ಳ 1892 ನೆಯ ಇಸವಿಯಲ್ಲಿ ದಿವಾನ್ ಬಹದ್ದೂರ್ ರಘುನಾಥರಾಯರು ಪ್ರಚುರಪಡಿಸಿದ ಪುಸ್ತಕವನ್ನು ತಂದು ಅದರ ಹನ್ನೊಂದನೆಯ ಅಧ್ಯಾಯದಲ್ಲಿರುವ ವಿಷಯವನ್ನು ತೋರಿಸಿದನು. ಅದರಲ್ಲಿ:—

"ತನ್ನನ್ನು ದಾನವಾಗಿ ಪಡೆದ ಪತಿಯು ಕಾಲವಾಗುವಾಗ
ಪುರುಷ ಸಂಭೋಗ ಹೊಂದದ ಸ್ತ್ರೀಯು ವೇದ ಮಂತ್ರಗಳೊಡ
ನೆಯೂ, ಪುರುಷ ಸಂಭೋಗ ಹೊಂದಿದ ಸ್ತ್ರೀಯು ವೇದ ಮಂತ್ರಗ
ಳಿಲ್ಲದೆಯೂ, ಇಷ್ಟವಿದ್ದರೆ ಪುನರ್ವಿವಾಹವಾಗಬಹುದು" ಎಂದು
ಬರೆದು ಋಗ್ವೇದದಿಂದ ಮೊದಲುಗೊಂಡು, ಶ್ರುತಿ, ಸ್ಮೃತಿ ಮೊದ
ಲಾದ ಇತಿಹಾಸ ಪುರಾಣಗಳಲ್ಲಿನ ಅನುಮತಿಗಳಲ್ಲಿ 20 ಶ್ಲೋಕಗಳ
ವರೆಗೂ ಪುಸ್ತಕದ ಹೆಸರು, ಕಾಂಡ, ಅಧ್ಯಾಯ, ವಾಕ್ಯ, ಪುಟ
ಮೊದಲಾದ ಲೆಕ್ಕಗಳೊಂದಿಗೆ ವಿವರಿಸಲ್ಪಟ್ಟಿದ್ದವು. ಇದನ್ನು ಓದಿದ
ಕೂಡಲೇ "ಆಹಾ! ಇಷ್ಟೊಂದು ಆಧಾರಗಳಿದ್ದೂ, ಇಷ್ಟನ್ನೂ ಈ
ರೀತಿಯಾಗಿ ಅಚ್ಚು ಹಾಕಿಸಿ ಪ್ರಚುರಗೊಳಿಸಿಯೂ ಕೂಡ ನಮ್ಮವರು
ವಿಧವಾವಿವಾಹವನ್ನು ಅಶಾಸ್ತ್ರೀಯವೆಂದು ಹೇಳುವರಲ್ಲಾ" ಎಂದನು.

ಶಚೀಂದ್ರ:—ಅಯ್ಯೋ! ನಮ್ಮವರಲ್ಲಿ ಶಾಸ್ತ್ರವನ್ನು ಸರಿಯಾಗಿ
ಅಭ್ಯಾಸ ಮಾಡಿರುವರು ಎಷ್ಟು ಮಂದಿ ಇರುವರಪ್ಪಾ! ಎಲ್ಲರೂ
ಇಂಗ್ಲೀಷ್ ಭಾಷೆಯನ್ನಭ್ಯಾಸಮಾಡುತ್ತಿರುವರು. ಸಂಸ್ಕೃತ ಓದು
ವರಲ್ಲಿ ಅಧ್ಯಯನಮಾಡಿ ಪದದ ಅರ್ಥವನ್ನು ತಿಳಿಯದವರೇ ಅನೇಕರು
ಭಾಷಾಜ್ಞಾನವನ್ನುದ್ದೇಶಿಸಿ ಕಲಿಯುವರು ಅತಿವಿರಳ. ಅವರಲ್ಲಿಯೂ
ಕಾವ್ಯ, ನಾಟಕ, ಅಲಂಕಾರ, ಇಷ್ಟಕ್ಕೇ ಅಭ್ಯಾಸವನ್ನು ಸಾಂಗ
ಗೊಳಿಸುವರು ಅನೇಕರು. ಇಷ್ಟಕ್ಕೆ ಪುರಾಣವನ್ನು ಓದಲೂ, ಕಥಾ
ಕಾಲಕ್ಷೇಪ ಮಾಡಲೂ ಹೊರಟು ಬಿಡುತ್ತಾರೆ. ಶಾಸ್ತ್ರಾಭ್ಯಾಸವನ್ನು
ಪೂರ್ತಿಯಾಗಿ ಮಾಡಿರುವರನ್ನು ಯಾರನ್ನೂ ಕಾಣೆನು. ಹಾಗೆ ಪೂರ್ತಿ
ಯಾಗಿ ಅಭ್ಯಾಸಮಾಡಿ ಧರ್ಮ ಶಾಸ್ತ್ರಗಳನ್ನೂ, ವೇದಗಳನ್ನೂ
ಅರಿತು ಅದರಂತೆ ನಡೆಯತಕ್ಕವರು ಒಬ್ಬಿಬ್ಬರೇ. ಅವರು ಪುರಾತನ
ಪದ್ಧತಿಗಳನ್ನು ಅನುಸರಿಸತಕ್ಕವರಾದ್ದರಿಂದ ಸುಧಾರಣೆಗಳಿಗೆ ಪ್ರತಿ
ಕೂಲರಾಗಿರುವರು. ಇನ್ನೂ ಹಾಗೆ ನೂತನ ಸಂಪ್ರದಾಯಗ
ಳನ್ನಪೇಕ್ಷಿಸುವ ಆಂಗ್ಲೇಯರ ಪದ್ಧತಿಯೂ ಅವರಿಗೆ ಸರಿಬೀಳುವು
ದಿಲ್ಲ. ಆದುದರಿಂದ ಅವರು ಈ ವಿಷಯಗಳಿಗೆ ಕಿವಿಗೊಡುವುದೇ ಇಲ್ಲ.
ವಿಧವಾ ವಿವಾಹಕ್ಕೆ ಶಾಸ್ತ್ರದಲ್ಲಿ ಅಧಿಕಾರವಿರುವುದೆಂದು ತಿಳಿದಿರುವ

ವರು ಎಲ್ಲೋ ಒಬ್ಬರಬ್ಬರು. ಅವರೂ ಮೇಲೆ ಹೇಳಿದ ಕಾರಣ ಗಳಿಂದ, "ಹೌದು ಆ ಸಂಪ್ರದಾಯಗಳೆಲ್ಲವೂ ಈ ಕಲಿಯುಗಕ್ಕೆ ತಕ್ಕವುಗಳಲ್ಲ" ಎಂದು ಹೇಳಿಬಿಡುವರು. ಕೊನೆಗೆ ಅವರುಗಳ ಅಪ್ರ ದೃಷ್ಟಿಯಿಂದಲೂ ಅನಾದರಣೆಯಿಂದಲೂ ಈ ನಿರ್ಭಾಗ್ಯವನಿತೆಯರು ಕೊರಗಬೇಕಾಗಿರುವುದು.

ಸುಂದರೇಶ:—ಒಳ್ಳೆಯದು. ವೇದಶಾಸ್ತ್ರಗಳಲ್ಲಿ ಅನುಮತಿ ಇರುವ ಪಕ್ಷದಲ್ಲಿ ನಮ್ಮ ಹಿರಿಯರೇಕೆ ಅನುಸರಿಸಲಿಲ್ಲ ? ಅನುಷ್ಠಾನ ದಲ್ಲಿಲ್ಲವಲ್ಲ.

ಶಚೀಂದ್ರ :—ಅದಕ್ಕೆ ಕಾರಣ ಗೊತ್ತಿಲ್ಲವೇನು ? ಆಕಾಲದಲ್ಲಿ ಸತಿ ವಿಶ್ವಾಸದಿಂದ ಪತಿಯು ಮರಣ ಹೊಂದುತ್ತಲು ಸತಿಯೂ ಆತನ ದೇಹದೊಂದಿಗೆ ಸಹಗಮನ ಮಾಡುತ್ತಿದ್ದಳು. ಆದುದರಿಂದ ಆ ಕಾಲದಲ್ಲ ಜೀವಿತ ವಿಧವೆಯರೇ ಇರಲಿಲ್ಲ. ಆಗ ಸಹಗಮನ ಮಾಡದೆ ಇಂತ ಒಬ್ಬಿಬ್ಬರು ಮೋಕ್ಷಸುಖವನ್ನುದ್ದೇಶಿಸಿ ತಪಸ್ಸನ್ನಾಚರಿಸುತ್ತಿ ದ್ದರು. ಆ ಕಾಲದಲ್ಲಿ ಪತಿಯೇ ಪರದೈವವೆಂದು ಭಾವಿಸಿದ್ದು ಪತಿಯ ಮರಣಾನಂತರ ಜೀವಿಸಿದ್ದವರು ಒಬ್ಬಿಬ್ಬರು. ಶಾಸ್ತ್ರದಲ್ಲಿ ಪುನರ್ವಿ ವಾಹಕ್ಕೆ ಅನುಮತಿಇದ್ದದ್ದೇನೋ ನಿಶ್ಚಯವೇ. ತರುವಾಯ ಆಂಗ್ಲೇ ಯರ ಪ್ರಭುತ್ವದಲ್ಲಿ ಸಹಗಮನ ಪದ್ಧತಿಯೂ ನಿಲ್ಲಿಸಲ್ಪಟ್ಟಿತು. ಅದೇ ನಮ್ಮ ಸ್ತ್ರೀಯರು ಈ ದುರ್ಗತಿಯನ್ನು ಹೊಂದಲು ಮೂಲಕಾರಣ ವಾಯಿತು. ಗತಿಸಿದ ಪತಿಯೊಂದಿಗೆ ಏಕ ಚಿತೆಯಲ್ಲಿ ಜೀವದೊಂದಿ ಗಿರುವವರನ್ನು ದಹಿಸುವದನ್ನು ನೋಡಿ ಸಹಿಸದ ಡಾಲ್‌ಹೌಸಿ ಪ್ರಭುವು ಹಾಗೆ ಸಹಗಮನದಿಂದ ನಿರೋಧಿಸಲ್ಪಟ್ಟ ವಿಧವೆಯರುಈಗ ಅನುಭವಿಸುತ್ತಿರುವ ಕಷ್ಟಪರಂಪರೆಗಳನ್ನು ಕಣ್ಣಾರ ಕಂಡಿದ್ದರೆ ಆ ಪದ್ಧತಿಯನ್ನು ಎಂದೂ ತಡೆಯುತ್ತಿರಲಿಲ್ಲ. ಯಾರ ಅಧಿಕಾರಕ್ಕೂ ಜಗ್ಗದ ನಮ್ಮ ಹಿಂದೂಗಳನ್ನು ಹೊಡೆದು, ಗತಿಯಿಲ್ಲದ ವಿಧವೆಯರ ಸಂಕಟಗಳನ್ನು ಪರಿಹರಿಸಲು ಮತ್ತೊಬ್ಬ ಡಾಲ್‌ಹೌಸಿ ಪ್ರಭುವು ಎಂದು ಬರುವನೋ ? ಈ ಕಾರಣಗಳಿಂದಲೇ ಶಾಸ್ತ್ರದಲ್ಲಿದ್ದರೂ ಅನುಷ್ಠಾನದಲ್ಲಿಲ್ಲದಿರುವುದು.

ಸುಂದರೇಶ:—ಹೌದು, ನಿಶ್ಚಯವೇ. ಆ ಕಾಲದಲ್ಲಿದ್ದವರ ಪತಿಭಕ್ತಿಯು ಆ ರೀತಿಯಾಗಿದ್ದಿತು. ಅವರ ಮೂಢತ್ವವು. ತಿಳಿದವರೇನಾದರೂ ಹೇಳಿದರೂ ಕೂಡ, "ಅವರು ಭ್ರಷ್ಟರಂತಲೂ, ಕಲಿ ಮಹಾರಾಯನ ಆಟವೆಂತಲೂ ಹೇಳುವರು."

ಶಚೀಂದ್ರ:—ಹೌದು, ಈ ಪದ್ಧತಿಯು ಈಗ ವೇದಶಾಸ್ತ್ರದಲ್ಲಿರುವುದೆಂತಲೂ, ಪದ್ಧತಿಯಿಲ್ಲದ್ದರಿಂದಲೇ ಈರೀತಿ ಇರುವುದೆಂತಲೂ ಈ ಪದ್ಧತಿಗೆ ಕಾರಣವೂ ಇಂತಹದ್ದೆಂದೂ ತಿಳಿಯುತಲ್ಲವೇ ? ಈಗ ನಾವು ಈಪದ್ಧತಿಯನ್ನು ಏರ್ಪಡಿಸಿ ಅದನ್ನನುಸರಿಸಿ ನಡದರೆ ಸರಿಹೋಗುವುದಲ್ಲವೇ ?

ಸುಂದರೇಶ:—ಹೌದು. ಸರಿಹೋಗುವುದು.

ಶಚೀಂದ್ರ:—ಒಂದು ಪದ್ಧತಿಯನ್ನು ಅನುಸರಿಸುವಂತೆ ಜನಸಮೂಹಕ್ಕೆ ಏರ್ಪಡಿಸಿದವರು ಯಾರು ?

ಸುಂದರೇಶ:—ಆಯಾ ಮಠಾಚಾರ್ಯರೂ, ಇನ್ನೂ ಇರುವ ವಿದ್ವಾಂಸರೂ.

ಶಚೀಂದ್ರ:—ನಮ್ಮ ಮಠಾಚಾರ್ಯರು ಶಂಕರಾಚಾರ್ಯರು ತಾನೇ ?

ಸುಂದರೇಶ:—ಹೌದು.

ಶಚೀಂದ್ರ:—ಇನ್ನೂ ಯಾರಯಾರ ಅನುಮತಿಯು ಅವಶ್ಯಕವಾಗಿರುವುದು ?

ಸುಂದರೇಶ:—ಅಲ್ಲಲ್ಲಿರುವ ಅನೇಕವಿದ್ವತ್ ಶಿರೋಮಣಿಗಳು.

ಶಚೀಂದ್ರ:—ಇವರುಗಳನ್ನು ಕೇಳಿನಾವೇಕೆಅನುಮತಿಯನ್ನು ಪಡೆಯಕೂಡದು ?

ಸುಂದರೇಶ:—ಅನುಮತಿಯನ್ನೇನೋ ಕೇಳಬಹುದು. ಆದರ ಅವರಷ್ಟು ಸುಲಭವಾಗಿ ಕೊಡಲಾರರು.

ಶಚೀಂದ್ರ :—ಏನಾದರೂ ಆಗಲಿ, ಮುಂದಿನ ರಜದಲ್ಲಿನಾನು ಹೋಗಿ ಅವರುಗಳೊಂದಿಗೆ ವಾದಿಸಿ ವಿಧವಾ ವಿವಾಹಕ್ಕೆ ಅನುಮತಿಯನ್ನು ಪಡೆದು ಬರುವೆನು.

ಸುಂದರೇಶ :—ಹಾಗೆಯೇ ಮಾಡು. ಆದರೆ ಮಿತವಾಗಿಯೂ ಮರ್ಯಾದೆಯಿಂದಲೂ ಅವರುಗಳೊಂದಿಗೆ ವಾದಿಸಬೇಕು.

ಶಚೀಂದ್ರ :—ಅದಕ್ಕೇನು ತಪ್ಪು.

ಈರೀತಿಯಾಗಿ ಇಬ್ಬರೂ ಮಾತನಾಡಿ ತೀರ್ಮಾನಿಸಿಕೊಂಡರು. ಅದರಂತೆಯೇ ಮುಂದಿನ ರಜದಿನದಲ್ಲಿ ಸುಂದರೇಶನು ವಿಧವಾವಿವಾಹಕ್ಕೆ ಸಮ್ಮತಿಯನ್ನು ಪಡೆಯಲು ಹೊರಟನು.

---

# ಹನ್ನೆರಡನೆಯ ಅಧ್ಯಾಯ.

---

## ಸುಂದರೇಶನ ಪ್ರಯತ್ನ.

ಹಿಂದಿನ ಅಧ್ಯಾಯದಲ್ಲಿ ಸುಂದರೇಶನು ವಿಧವಾ ವಿವಾಹಕ್ಕೆ ಸಮ್ಮತಿಯನ್ನು ಪಡೆಯಲುಹೊರಟನೆಂದು ತಿಳಿಸಿರುವುದಷ್ಟೆ. ಇವನು ಮೊದಲು ಅನಂತಶಯನದ ಕಾಲಡಿಯ ಸಮೀಪದಲ್ಲಿರುವ ಒಬ್ಬ ವಿದ್ವಾಂಸನನ್ನು ನೋಡಲು ಹೋದನು. ಸುಂದರೇಶನು ನೋಡಲು ಹೋದ ಪಂಡಿತನು ಮನೆಯ ಮುಂಭಾಗದ ಜಗುಲಿಯ ಮೇಲೆಯೇ ಕುಳಿತಿದ್ದನು. ಇವನನ್ನು ನೋಡುತ್ತಲೂ ಆ ಪಂಡಿತವರ್ಯನಿಗೆ ಅತ್ಯಂತ ಪ್ರೀತಿಯುಂಟಾಯಿತು. ಸುಂದರೇಶನು ಸ್ವಭಾವವಾಗಿಯೇ ಬಹಳ ರೂಪವಂತನೂಬುದ್ಧಿವಂತನೂ ಆಗಿದ್ದನು. ಅಲ್ಲದೆ ಪ್ರಾತಃಕಾಲದಲ್ಲೆದ್ದು ಸ್ನಾನ ಮಾಡಿ ವಿಭೂತಿಧಾರಣೆ ಮಾಡಿಕೊಂಡಿರುವುದನ್ನು ನೋಡಿದರೆ ನಾಸ್ತಿಕನು ಕೂಡ ಆಸ್ತಿಕನಾಗುವನು. ಇಂತಹ ದಿವ್ಯಮೂರ್ತಿಯನ್ನವಲೋಕಿಸಿದ ಪಂಡಿತನು ಇಷ್ಟೊಂದು ಬಾಲ್ಯದಿಂದ ಕೂಡಿದವನು ಈ ಕಾಲದಲ್ಲಿ ಇಷ್ಟೊಂದು ಆಚಾರಶೀಲನಾಗಿ

ರುವುದಕ್ಕಾಶ್ಚರ್ಯ ಪಟ್ಟು ಅತಿ ವಿಶ್ವಾಸದಿಂದ ಸುಂದರೇಶನನ್ನು ಕುಳಿತುಕೊಳ್ಳುವಂತೆ ಹೇಳಿ ಬಂದಕಾರ್ಯದ ಉದ್ದೇಶವನ್ನು ಕೇಳಿದನು.

ಸುಂದರೇಶನು ಬಹಳ ವಿನಯದಿಂದಲೂ, ವಿಶ್ವಾಸದಿಂದಲೂ, ಅತಿಶ್ರದ್ಧೆಯಿಂದಲೂ, ತಾನು ಬಂದಕಾರ್ಯದ ಉದ್ದೇಶವನ್ನು ತಿಳಿಸಿದನು. ಅದನ್ನು ಕೇಳಿದ ಆ ಪಂಡಿತನು "ಅಪ್ಪಾ ಮಗೂ, ಈ ವಿಷಯವನ್ನು ಕುರಿತು ನನ್ನನ್ನು ಕೇಳಬೇಡ. ನಾನು ಯಾವ ಅಭಿಪ್ರಾಯವನ್ನೂ ಕೊಡಲಾರೆನು" ಎಂದನು.

ಅದಕ್ಕೆ ಸುಂದರೇಶನು, ! "ಪಂಡಿತವರ್ಯ, ! ತಾವೇ ಹೀಗೆ ಹೇಳಿದರೆ ಮತ್ಯಾರು ತಾನೇ ನನ್ನ ಪ್ರಶ್ನೆಗೆ ಉತ್ತರಕೊಡಬಲ್ಲರು.! ತಮ್ಮಂತಹ ವಿದ್ವಾಂಸರನ್ನು ನಾನೆಲ್ಲಿ ಕಾಣಲಿ ! ತಮ್ಮನ್ನು ತಾನೇ ನಮ್ಮ ಸಮೂಹದವರೆಲ್ಲಾ ಆಧಾರವಾಗಿ ನಂಬಿರುವರು. ಅಜ್ಞಾನದಲ್ಲಿಮುಳುಗಿರುವರನ್ನು ಉದ್ಧರಿಸಲು ಬದ್ಧಕಂಕಣರಾಗಿರುವತಾವೇ ಹೀಗೆ ಹೇಳಿದರೆ ನಾನು ಯಾರನ್ನು ಮರೆಹೊಗಲಿ ? ಎಲ್ಲರೂ ಪುನರ್ವಿವಾಹವು ಅಶಾಸ್ತ್ರೀಯವೆನ್ನುವರಲ್ಲಾ; ಹೌದೇ, ಅಲ್ಲವೇ, ಎಂದು ತಮ್ಮಂಥಾ ಮೇಧಾವಿಗಳಲ್ಲವೇ ತೀರ್ಮಾನಿಸಬೇಕು. ತಮ್ಮಂತಹ ಪೂರ್ಣವಿದ್ವಾಂಸರು ಮೌನವಾಗಿರುವುದೂ, ವಿದ್ಯಾಗಂಧವಿಲ್ಲದ ಪಾಮರರು ಶಾಸ್ತ್ರಹೇಳುವುದೂ ಬಹಳಚೆನ್ನಾಗಿರುವುದಲ್ಲವೇ ? ಆದುದರಿಂದ ದಯವಿಟ್ಟು ದೊಡ್ಡ ಮನಸ್ಸುಮಾಡಿ ನನ್ನ ಪ್ರಶ್ನೆಗೆ ಉತ್ತರ ಕೊಡಬೇಕು" ಎಂದು ಪ್ರಾರ್ಥಿಸಿದನು.

ಪಂಡಿತ :—ಅಪ್ಪಾ, ನಿನ್ನನ್ನುನೋಡುತ್ತಲೂ ನನ್ನಲ್ಲಿನನಗೊಂದು ಬಗೆಯಾದ ವಿಶ್ವಾಸವು ಜನಿಸಿರುವುದು. ನಿನ್ನ ಆಸಕ್ತಿಯನ್ನೂ ಅದರ ವಿಷಯದಲ್ಲಿ ನೀನು ಪಡತಕ್ಕ ಶ್ರಮವನ್ನೂ ಅರಿತೆನು. ಆದುದರಿಂದ ನಾನು ಒಂದೇ ಮಾತನ್ನು ಹೇಳಿಬಿಡುವೆನು. ನಾನು ಈ ವಿಷಯಗಳಲ್ಲೆಲ್ಲಾ ಪ್ರವೇಶಿಸಲಾರೆನು.

ಸುಂದರೇಶ :—ತಾವು ಈ ರೀತಿ ಹೇಳಿದರೆ ನಮ್ಮ ಸಮೂಹವು ಮುಂದಕ್ಕೆ ಬರುವ ಬಗೆಹೇಗೆ ?

ಪಂಡಿತ:—ನಾನಿನ್ನು ಸ್ವಲ್ಪ ದಿನ ತಾನೇ ಇರುವೆನು. ನಡೆಯುವ ಕಾರ್ಯವು ಎಂದಾದರೂ ನಡೆದೇ ತೀರಬೇಕು. ನಾವ ನಡೆಸಬೇಕೆಂದು ಪ್ರಯತ್ನ ಪಟ್ಟರೆ ನಡೆಯಲೂ ಆಗದು. ಆದುದರಿಂದ ನಡೆಯುವ ಕಾರ್ಯವು ತನ್ನಷ್ಟಕ್ಕೆ ತಾನೇ ನಡೆಯುವುದು. ನನ್ನ ಕಾಲ ವನ್ನು ನಾನು ಹೀಗೆಯೇ ಕಳೆಯುವೆನು.

ಸುಂದರೇಶ:—ದೊರೆಯುವ ವಸ್ತುವು ದೊರಕಿದಂತೆ ದೊರ ಕಿದ ತಾನೇ ಗಮನ ಕೊಡವಿದ್ದರೆ ನಾನೇನು ತಾನೇ ಮಾಡಬೇಕು! ಒಳ್ಳೆಯದು ಸ್ತ್ರೀಯರಿಗೆ ಪುನರ್ವಿವಾಹವು ಶಾಸ್ತ್ರೀಯವೋ ಅಥವಾ ಅಶಾ ಸ್ತ್ರೀಯವೇ ಎಂಬುದನ್ನು ಮಾತ್ರ ತಿಳಿಸಿ.

ಪಂಡಿತ:—ಅಪ್ಪಾ, ಅದನ್ನು ಹೇಗೆ ನಿಶ್ಚಯವಾಗಿ ಹೇಳಲಿ. ಋಗ್ವೇದ, ಅಥರ್ವಣ ವೇದಗಳೂ, ಮನು, ಪರಾಶರರೂ, ಯಾಜ್ಞ ವಲ್ಕ್ಯ, ಶ್ರುತಿಸ್ಮೃತಿಗಳೂ, ವಸಿಷ್ಟರೂ, ಬೌಧಾಯನರೂ, ಕಾತಾ ಯನರೂ, ನಾರದಾದಿ ಸೂತ್ರಗಳೂ, ಮಹಾಭಾರತ, ಅಗ್ನಿ, ಭಾಗ ವತವೇ ಮೊದಲಾದ ಪುರಾಣಗಳೂ, ಇತಿಹಾಸಗಳೂ ಪುನರ್ವಿವಾಹ ವನ್ನು ಅನುಮೋದಿಸಿರುವವು.

ಸುಂದರೇಶ:—ಪಂಡಿತವರ್ಯ! ಹಾಗೆ ಅನುಮೋದಿಸಿರುವ ಪಕ್ಷದಲ್ಲಿ ಯಾತಕ್ಕೆ ಅನುಷ್ಠಾನಕ್ಕೆ ಬರಲಿಲ್ಲ.? ಈ ಪದ್ಧತಿಯು ತಡೆ ಯಲ್ಪಟ್ಟದ್ದು ಯಾವಾಗ? ಅದಕ್ಕೆ ಕಾರಣವೇನು?

ಪಂಡಿತ.—ಅಪ್ಪಾ, ಅದು ಶಾಸ್ತ್ರೀಯವಾದರೂ, ಶಾಸ್ತ್ರಗಳ ಲ್ಲಿಯೂ, ಶ್ರುತಿಗಳಲ್ಲಿಯೂ ಪುನರ್ವಿವಾಹಕ್ಕಿಂತ ಸಹಗಮನವೇ ಉ ತ್ಕೃಷ್ಟವಾದದ್ದೆಂದು ಹೇಳಲ್ಪಟ್ಟಿದೆ. ಆ ರೀತಿ ಸಹಗಮನ ಮಾಡು ವುದೇ ಆ ಕುಟುಂಬಕ್ಕೆ ಒಂದು ಗೌರವವಾಗಿ ಭಾವಿಸಲ್ಪಟ್ಟಿತ್ತು. ಪರಾಶರರು ಈ ವಿಷಯವನ್ನು ಎಂದರೆ ಪುನರ್ವಿವಾಹ ವಿಚಾರವನ್ನು ಅನುಮೋದಿಸದಿದ್ದುದರಿಂದ ತಡೆಯಲ್ಪಟ್ಟಿತು. ತರುವಾಯ ಒಂದಂ ಥಾ ಪುರಾಣಿಕರು ಕಾಲದೇಶಗಳನ್ನನುಸರಿಸಿ ಪುನರ್ವಿವಾಹಾಧಿಕಾರ ವು ಕಲಿಯುಗಕ್ಕೆ ತಕ್ಕದ್ದಲ್ಲವೆಂತಲೂ, ಸಹಗಮನವೇ ಯುಕ್ತವಾ

ದುದೆಂತಲೂ, ಸಹಗಮನ ಮಾಡಲಿಷ್ಟವಿಲ್ಲದವರು ತಪಸ್ಸನ್ನಾಚರಿಸ ಬಹುದೆಂತಲೂ ಬರೆದಿಟ್ಟರು. ಆದುದರಿಂದ ವಿಶೇಷವಾಗಿ ಎಲ್ಲರೂ ಸಹಗಮನವನ್ನೇ ಮಾಡುತ್ತಾ ಬಂದರು. ಆ ಪದ್ಧತಿಯು ಬ್ರಿಟಿಷ್ ಪ್ರಭುತ್ವದವರಿಂದ ತಡೆಯಲ್ಪಟ್ಟ ಒಡನೆಯೇ ಈ ರೀತಿ ಇರಬೇಕಾಗಿ ಬಂದಿತು. ಆದರೆ ಆ ಕಾಲದಲ್ಲಿ ಇಷ್ಟೊಂದು ಜನ ಅಕಾಲ ವಿಧವೆಯು ಬಿದ್ದುದಾಗಿ ಕಂಡು ಬರುವುದಿಲ್ಲ.

ಸುಂದರೇಶ :—ಆದರೆ, ವೇದವೇ ಮೊದಲಾದ ಅಧಿಕಾರವನ್ನು ಕೊಟ್ಟು ಅನೇಕ ಸ್ಮೃತಿಕಾರರು ಅನುಮೋದಿಸಿಯೂ ಪರಾಶರರು ಒಬ್ಬರು ತಡೆಮಾಡಿದ್ದರಿಂದಲೂ ಕೆಲವು ಪುರಾಣಗಳ ತಡೆಯಿಂದಲೂ ಇಷ್ಟೊಂದು ಕಷ್ಟಗಳುಂಟಾದುವೇ ? ವೇದವೇ ಮೊದಲಾದ ಸ್ಮೃತಿ ಗಳಿಗಿಂತ ಇವೇ ಮೊದಲಾದುವುಗಳೇ ?

ಪಂಡಿತ :—ಹಾಗಲ್ಲ. ಆಯಾ ಕಾಲಕ್ಕೆ ತಕ್ಕಂತೆಯೂ, ಜನ ರಸ್ಥಿತಿಗೆ ತಕ್ಕಂತೆಯೂ, ವೇದ ಶಾಸ್ತ್ರಗಳನ್ನು ಬದಲಾಯಿಸುವ ಅಧಿ ಕಾರವು ಸ್ಮೃತಿ ಕರ್ತರಿಗೂ, ಪರಿಷತ್ತುಗಳಿಗೂ (ವಿದ್ವತ್ ಸಮೂಹ ಗಳಿಗೂ) ಕೊಡಲ್ಪಟ್ಟಿರುವುವು. ಆದರಂತೆಯೇ ಅವರು ಮಾಡುತ್ತ ಬಂದದ್ದರಿಂದ ಅವೇ ಆಧಾರವಾಗಿ ನಿಂತವು.

ಸುಂದರೇಶ :—ಒಳ್ಳೆಯದು. ತಾವು ಹೇಳಿದಂತೆಯೇ ಆಯಾ ಕಾಲಕ್ಕೂ, ಜನರ ಸ್ಥಿತಿಗೂ, ಅವರವರ ಅನುಕೂಲಕ್ಕೂ ತಕ್ಕಂತೆ ವೇದ ಶಾಸ್ತ್ರಗಳನ್ನೂ ಕೂಡ ಬದಲಾಯಿಸುವುದೆಂದರೆ, ಎಲ್ಲಾ ವಿಷ ಯಗಳಿಗಿಂತಲೂ ಜನಸಮೂಹದ ಸುಖವನ್ನು ಮುಖ್ಯವಾಗಿ ಗಮನಿ ಸಬೇಕಾಗಿರುವುದೆಂದು, ವ್ಯಕ್ತವಾಗುವುದಲ್ಲವೇ ? ಅದನ್ನು ಉದ್ದೇ ಶಿಸಿಯೇ ಪರಾಶರ ಮಹರ್ಷಿಗಳೂ ಬದಲಾಯಿಸಿದಂತೆ ತೋರುತ್ತದೆ. ಆ ಕಾಲದಲ್ಲಿದ್ದ ಜನರ ಸ್ಥಿತಿಯಲ್ಲಿ ಬಾಲವಿಧವೆಯರು ಈಗ ಇದ್ದಷ್ಟು ಜನವಿಲ್ಲದ್ದರಿಂದ ಸಹಗಮನ ನಿಲ್ಲಿಸಲ್ಪಟ್ಟಿರುವುದು. ಬಾಲವಿಧವೆಯರ ಸಂಖ್ಯೆಯಾದರೋ ಅಪರಿಮಿತವಾಗಿರುವುದು. ಅವರ ಕಷ್ಟವೂ ಸಹಿಸಲಸಾಧ್ಯವಾಗಿರುವುದು. ಆದರೆ ಅನೇಕ

ಪದ್ಧತಿಗಳು ಬದಲಾಯಿಸಿರುವ ಈ ಕಾಲದಲ್ಲಿ ಇದೊಂದು ಹೆಚ್ಚಲ್ಲ. ಆದುದರಿಂದ ಅವುಗಳನ್ನು ತಮ್ಮಂಥ ವಿದ್ವಾಂಸರು ಈಗ ಏತಕ್ಕೆ ಬದಲಾಯಿಸಕೂಡದು ? ಹಾಗೆ ಬದಲಾಯಿಸುವುದರಿಂದ ಜನಸಮೂಹಕ್ಕೆಷ್ಟು ಉಪಕಾರ ಮಾಡಿದಂತಾಗುವುದು. ಕಾಲಕ್ಕೆ ತಕ್ಕಂತೆ ಬದಲಾವಣೆಯನ್ನು ಈಗ ಏತಕ್ಕೆ ಮಾಡಬಾರದು? ತಮ್ಮಂಥಾ ವಿದ್ಯಾಧುರೀಣರು ಮಾಡದಿದ್ದರ ಮತ್ಯಾರು ತಾನೆ ಮಾಡಬಲ್ಲರು? ಬರುತ್ತಾ ಬರುತ್ತಾ ಜನಸಮೂಹವೇ ಕ್ಷೀಣಿಸುತ್ತಿರುವುದು. ಸ್ವಭಾಷೆಯಲ್ಲಿ ಆಸಕ್ತಿಯೂ ಹೆಚ್ಚುತ್ತಿರುವುದು. ಆ ರೀತಿ ಆಗದಂತೆ ತಮ್ಮಂಥಾ ಮಹನೀಯರಲ್ಲವೇ ತಡೆಯಬೇಕಾಗಿರುವುದು. ಹಾಗಿಲ್ಲದಿದ್ದರ ಅನೇಕ ವಿಷಯಗಳಿಂದಲೂ ಅಜ್ಞಾನಾ ಸ್ವರೂಪವಾಗಿರುವ ಶಾಸ್ತ್ರಗಳೆಲ್ಲವೂ ಇದ್ದ ಸ್ಥಳವೇ ತಿಳಿಯದೆ ನಶಿಸಿ ಹೋಗುವುದಲ್ಲವೇ ? ತಾವು ಹೇಳಿದಂತೆ ನಡೆಯತಕ್ಕ ಸುಧಾರಣೆಗಳು ನಡೆದೇ ತೀರುವವು ! ಒಂದೇ ಬಟ್ಟೆಯನ್ನು ಎಷ್ಟು ದಿನ ತಾನೇ ಧರಿಸಿರುವುದು ! ಹಳೆಯದಾಗುತ್ತಾ ಆಗುತ್ತಾ ತೆಗೆದುಬಿಸಾಡಬೇಕಲ್ಲವೇ ! ಹಾಗೆ ಮಾಡದೆ ಪುನಃ ಪುನಃ ಅದನ್ನೇ ತೇಪೆ ಹಾಕಿ ಹಾಕಿ ಧರಿಸಿಕೊಂಡರ ಬಟ್ಟೆಯು ಛೇದವಾಗುವದಲ್ಲವೇ ? ಅದರಂತೆಯೇ ಈ ವಿಷಯದಲ್ಲಿಯೂ ಇರತಕ್ಕದ್ದು ಮುಖ್ಯವಲ್ಲವೇ ?

ಪಂಡಿತ :—ಅಪ್ಪಾ. ನೀನು ಹೇಳುವುದೆಲ್ಲಾ ನಿಶ್ಚಯವೇ. ನನಗೂ ತಿಳಿದಿರುವುದು. ಆದರೆ ನಾನಿರುವ ವರೆಗೂ ಅನೇಕ ಕಾರಣಗಳನ್ನುದ್ದೇಶಿಸಿ ನಾನು ಮುಂದಾಳಾಗಿ ಬರಲಾರೆನು. ಅತಿ ಮೇಧಾವಿಗಳೂ ದೇಶಾಭಿಮಾನಿಗಳೂ ಆದ ನೀವು ಏನು ಬೇಕಾದರೂ ಮಾಡಿಕೊಳ್ಳಿರಿ. ಆದರ ನಮ್ಮ ವೇದಶಾಸ್ತ್ರಗಳನ್ನು ಮಾತ್ರ ಉಲ್ಲಂಘಿಸಬೇಡಿ. ಅವುಗಳೇ ನಮಗೆ ಅಕ್ಷಯಪಾತ್ರೆಗಳು. ನಿಮಗೇನುಬೇಕಾದರೂ ಶಾಸ್ತ್ರದಲ್ಲಿ ಸಿಕ್ಕುವುದು. ಅವುಗಳನ್ನು ನೀವು ಹೇಗೆಬೇಕಾದರೂ ಬದಲಾಯಿಸಬಹುದು. ಹಾಗೆ ಬದಲಾಯಿಸುವದಕ್ಕೆ ನಮಗೆ ಹಿರಿಯರ ಅನುಮತಿಯುಂಟು. ಆದರ ಕಾಲ ದೇಶ ವರ್ತಮಾನಗಳನ್ನನುಸರಿಸಿ ದೀರ್ಘವಾಗಿ ಆಲೋಚನೆ ಮಾಡಿ ಬುದ್ಧಿವಂತರಾಗಿರತ

ಕ್ಕೆ ಸಮೂಹದ ಮುಖಂಡರು ಒಪ್ಪುವಂತೆ ಮಾಡಬೇಕು. ಹ್ಯಾಗೂ ವೇದಶಾಸ್ತ್ರಗಳನ್ನು ಕೈಯಾಡಿ ಬರುವವರಿಗೂ ನಮಗೇನೂ ಕೊರತೆ ಯಿಲ್ಲ" ಎಂದು ಹೇಳಿ ಮುಗಿಸಿದನು.

ಸುಂದರೇಶನು ಪಂಡಿತನ ವಿದ್ಯೆಯನ್ನೂ, ಜ್ಞಾಪಕಶಕ್ತಿಯ ನ್ನೂ, ತರ್ಕದಲ್ಲಿಯೂ ವಾದದಲ್ಲಿಯೂ, ಆತನಿಗಿರತಕ್ಕ ಕೌಶಲ್ಯ ವನ್ನೂ, ಹಿರಿಯರಲ್ಲಿಯೂ ವೇದಶಾಸ್ತ್ರದಲ್ಲಿಯೂ ಅವನಿಗಿರತಕ್ಕ ಭಕ್ತಿ ವಿಶ್ವಾಸವನ್ನೂ, ಜನಸಮೂಹದಲ್ಲಿ ಆತನಿಗಿರತಕ್ಕ ಪ್ರೇಮವನ್ನೂ, ವಚನಮಾಧುರ್ಯವನ್ನೂ ನೆನೆದು ತನ್ನಲ್ಲಿ ತಾನೇ ಸಂಪ್ರೀತನಾಗಿ ಸ್ವಲ್ಪ ಹೊತ್ತು ಮೌನವಾಗಿದ್ದು, ತರುವಾಯ ಎದ್ದು ಆತನಿಗೆ ನಮಸ್ಕಾರ ಮಾಡಿ ಆತನಿಂದ ಅಪ್ಪಣೆಯನ್ನು ಹೊಂದಿ ಬಂದನು.

ಪಂಡಿತನ ಮಾತಿನಿಂದ ಪುನರ್ವಿವಾಹವು ಅಶಾಸ್ತ್ರೀಯವಲ್ಲವೆಂ ತಲೂ, ಪೂರ್ವಕಾಲದಲ್ಲಿ ಅನುಷ್ಠಾನದಲ್ಲಿದ್ದಿತೆಂತಲೂ ತರುವಾಯ ಕಾಲಭೇದವನ್ನನುಸರಿಸಿ ತಡೆಯಲ್ಪಟ್ಟಿತೆಂತಲೂ, ಈಗಲೂ ತಕ್ಕವರು ಸೇರಿ ಒಡಂಬಡಿಸುವುದಕ್ಕೆ ಸಂಪೂರ್ಣವಾದ ಹಕ್ಕು ಬಾಧ್ಯತೆಗಳಿರು ವುವೆಂತಲೂ ತಿಳಿದು ಬಂದಿತು. ಇವರೂ ತಾವೀವಿಷಯದಲ್ಲಿ ಪ್ರವೇ ಶಿಸಲಾರರೆಂದು ಹೇಳಿಬಿಟ್ಟರು. ಹೀಗೆಯೇ ನಮ್ಮೂರಿನಲ್ಲಿದ್ದ ಆ ಪಂಡಿತನೂ ಹೇಳಿಬಿಟ್ಟನು. ಆದುದರಿಂದ ಇನ್ನು ಅಲ್ಲಿಇಲ್ಲಿ ಹೋಗು ವುದರಿಂದೇನೂ ಪ್ರಯೋಜನವಿಲ್ಲ. ಪೂರ್ಣವಿದ್ವಾಂಸರೆಂದು ಎಲ್ಲ ರಿಂದಲೂ ಗಣಿಸಲ್ಪಡುವವರೂ, ಸಮೂಹದ ಮುಖಂಡರೆಂದು ಭಾವಿಸಲ್ಪಡುವವರೂ, ಮಠಾಧಿಪತಿಯಾಗಿರುವವರೂ, ಹಿಂದೂ ಸಮೂಹದ ಪ್ರತಿಯೊಂದು ಕಾರ್ಯಗಳಿಗೂ ಅಧಿಕಾರಿಯೂ, ಯಾವ ಬದಲಾವಣೆ ಏರ್ಪಡಿಸಿದರೂ ಜನರಿಂದ ಅಂಗೀಕರಿಸಲ್ಪಡುವ ಅಧಿಕಾ ರವನ್ನು ಹೊಂದಿರತಕ್ಕವರೂ ಆದ ಶ್ರೀಮದ್ಭಗವತ್ಪಾದ ಶಂಕರಾ ಚಾರ್ಯರಲ್ಲಿಗೆ ಹೋಗುವುದೇ ಉತ್ತಮವೆಂದು ತೀರ್ಮಾನಿಸಿ ಅವರ ವಾಸಸ್ಥಳವನ್ನು ವಿಚಾರಿಸಿಕೊಂಡು ಅವರಿರುವ ಸ್ಥಳವನ್ನು ಹುಡುಕಿ ಕೊಂಡು ಹೋಗಲು ಅವರು ದೇಶಸಂಚಾರದಲ್ಲಿರುವರೆಂದು ತಿಳಿದು ಅವರ ಸಂದರ್ಶನಕ್ಕೆ ಕೆಲವು ದಿನಗಳು ಕಾದಿದ್ದೂ ಅವರು ಬರದೇ

ಇದ್ದುದರಿಂದ ಅವರು ಹೋಗಿರುವ ಉತ್ತರದೇಶದ ಕಡೆಗೆ ಹೋಗಿ ಅವರನ್ನು ಕಂಡು ಅವರಿಗೆ ಅಭಿವಂದಿಸಿ ತಾನು ಬಂದ ಉದ್ದೇಶವನ್ನು ತಿಳಿಸಿದನು. ಅವರೂ ಪಂಡಿತನಂತೆಯೇ ಸುಂದರೇಶನನ್ನು ಕಾಣುತ್ತಲೂ ಬಹಳ ವಿಶ್ವಾಸವುಳ್ಳವರಾಗಿ ಮಂದಹಾಸದಿಂದ ಪಂಡಿತಸರ್ಮನು ಹೇಳಿದಂತೆಯೇ ವಿಧವಾ ವಿವಾಹವು ಅಶಾಸ್ತ್ರೀಯವಲ್ಲವೆಂತಲೂ, ಶ್ರುತಿಸ್ಮೃತಿಗಳಿಂದ ಅನುಮೋದಿಸಲ್ಪಟ್ಟಿರುವವೆಂತಲೂ, ಸಹಗಮನದ ಪ್ರಾಧಾನ್ಯದಿಂದ ನಶಿಸಲ್ಪಟ್ಟಿತೆಂತಲೂ, ಕಾಲಕ್ಕೆ ತಕ್ಕಂತೆಯೇ ಈ ಬದಲಾವಣೆಯು ಏರ್ಪಟ್ಟಿತೆಂತಲೂ ಆದುದರಿಂದ ಅನುಷ್ಠಾನವೇ ದೊಡ್ಡದೆಂದೂ ಹೇಳಿದರು.

ಸುಂದರೇಶನು :—ವೇದ ಶಾಸ್ತ್ರಸ್ಮೃತಿಗಳಲ್ಲಿ ಸಮ್ಮತಿ ಇದ್ದರೂ ಅನುಷ್ಠಾನವೇ ದೊಡ್ಡದಾಯಿತು.

ಶಂಕರಾಚಾರ್ಯರು :—ಹೌದು. ಅನುಷ್ಠಾನವೇ ದೊಡ್ಡದು. ಈಗ ನಾವು ಮಾತನಾಡುತ್ತಲಿರುವ ಪುನರ್ವಿವಾಹದ ವಿಷಯದಲ್ಲಿ "ಮಾಡಬಹುದು" ಎಂದು ಅನುಮತಿಯಿರುವುದೇ ಹೊರ್ತು "ಮಾಡಬೇಕು" ಎನ್ನುವ ನಿರ್ಬಂಧವಿಲ್ಲ. ಇನ್ನೂ ಅನೇಕ ವಿಷಯಗಳಲ್ಲಿ "ಹೀಗೆಯೇ ಮಾಡಿತೀರಬೇಕು" ಎಂದು ಹೇಳಿದರೂ ಕೂಡ ಅದಕ್ಕೆ ವಿರೋಧವಾಗಿಯೇ ಅನುಷ್ಠಿಸಲ್ಪಡುತ್ತ ಹಾಗೆ ಅನುಷ್ಠಿಸಲ್ಪಡದೆ ಹೋದರೆ ಅವರು ನಿಂದಿಸಲ್ಪಡುವರು. ಅನುಷ್ಠಾನವೆನ್ನುವುದು ಅಷ್ಟು ಬಲವಾಗಿರುವುದು. ಇದಕ್ಕೆ ದೃಷ್ಟಾಂತವಾಗಿ "ವಿವಾಹಮಾಡಿಕೊಳ್ಳಲು ಸಮ್ಮತವಿಲ್ಲದಿದ್ದರೆ ಅವಳನ್ನು ದಾನಮಾಡಕೂಡದು" ಎಂದು ವಸಿಷ್ಟರು, ಕಾತ್ಯಾಯನರು ಮೊದಲಾದವರೂ, ಮಹಾಭಾರತ, ಮಾರ್ಕಂಡೇಯಪುರಾಣ, ದೇವೀಭಾಗವತ ಮೊದಲಾದಪುರಾಣಗಳೂ ಮೊರೆಯಿಡುತ್ತಲಿರುವುವು. ಹಾಗಿದ್ದೂ ಕೂಡ ಅವುಗಳನ್ನು ಲಕ್ಷ್ಯ ಮಾಡುವರು ಯಾರು ? ಇನ್ನು ಇದರಲ್ಲಾದರೋ ವಧುವಿನ ಅನುಮತಿಯನ್ನು ಕೇಳುವುದು ಅಷ್ಟು ನಿಕೃಷ್ಟವಾಗಿ ಭಾವಿಸಲ್ಪಟ್ಟಿಲ್ಲ; ಮತ್ತು "ವೇದಗಳು, ಅವುಗಳ ಸೂತ್ರಗಳು, ವ್ಯಾಕರಣ ಇವುಗಳಲ್ಲಿ ಹೇಳಲ್ಪಟ್ಟಿರುವಂತೆ ವಿವಾಹಕ್ಕೆ ಸಿದ್ಧಳಾಗಿರತಕ್ಕಂತ ಕನ್ನಿಕೆಯು

“ ವಿವಾಹ ವಿಧಿಗಳು ಪ್ರಾರಂಭಿಸಲ್ಪಟ್ಟ ದಿನದ ಮೊದಲು ನಾಲ್ಕನೇ ದಿನ ಅಥವ ಆಮೇಲೆ ಶರೀರ ಸಂಭೋಗಕ್ಕೆ ತಕ್ಕವಳಾಗಿರಬೇಕು.” ಇದನ್ನು ಲಕ್ಷ್ಯ ಮಾಡದಿರುವುದಲ್ಲದೆ ಅಂತಹ ಕನ್ನಿಕೆಯನ್ನು ಮದುವೆ ಮಾಡಿಸುವವನೂ, ಮಾಡಿಕೊಳ್ಳತಕ್ಕವನೂ ಅವ್ಯವಹಾರಿಯಾಗಿ ಜಾತಿಭ್ರಷ್ಟರಾಗುವರು. ಆದುದರಿಂದ ಅನುಷ್ಠಾನವೇ ದೊಡ್ಡದು ” ಎಂದುಹೇಳಿ ಮುಗಿಸಿದರು.

ಸುಂದರೇಶನು :—“ ಮಹಾತ್ಮರೇ, ಇಂತಹ ಅನುಷ್ಠಾನವನ್ನು ಕಾಲಕ್ಕೂ, ಜನಸಮೂಹದ ಸೌಕರ್ಯಕ್ಕೂ ತಕ್ಕಂತೆ ಬದಲಾಯಿಸಿಕೊಳ್ಳಬಹುದಂತೆ. ಹಾಗೆಮಾಡಬಹುದೆಂದು ಶಾಸ್ತ್ರದಲ್ಲಿ ಅಪ್ಪಣೆಯಾಗಿರುವುದಂತಲ್ಲಾ ? ”

ಶಂಕರಾಚಾರ್ಯ ಸ್ವಾಮಿಗಳು :—ಹೌದು, ಬದಲಾಯಿಸಬಹುದೆಂದು ಅಪ್ಪಣೆ ಇರುವುದು.

ಸುಂದರೇಶನು :—ಹಾಗೆ ಬದಲಾಯಿಸಲು ಯೋಗ್ಯತೆಯುಳ್ಳವರ್‍ಯಾರು ?

ಶಂಕರಾ :—ಎಲ್ಲರಿಂದಲೂ ಶಾಸ್ತ್ರವೇತ್ತರೆಂದು ಕೊಂಡಾಡಲ್ಪಡತಕ್ಕವರುಗಳೂ ಪರಿಷತ್ತುಗಳೂ ಬದಲಾಯಿಸಬಹುದು.

ಸುಂದರೇಶ :—ಅಂಥಾ ಪಂಡಿತರು ಕಮ್ಮಿಯಾಗಿಯೂ ಐಕಮತ್ಯವೂ ಇಲ್ಲದಿರುವ ಈ ಕಾಲದಲ್ಲಿ ಸನ್ನಿಧಾನದಂಥಾ ಅಧಿಕಾರಿಗಳು ಇಲ್ಲಿರತಕ್ಕ ವಿದ್ವತ್ಸಮೂಹದವರೊಂದಿಗೆ ಆಲೋಚಿಸಿ ಅಂತಹ ಬದಲಾವಣೆಗಳನ್ನು ಮಾಡಿದರಲ್ಲವೇ ದೇಶಕ್ಕೆ ಸೌಖ್ಯವುಂಟಾಗುವುದು ?

ಶಂಕರ :—ನಾವು ಆ ರೀತಿ ಮಾಡಕೂಡದು. ನಾವಾಗಿ ಮಾಡುವುದರಲ್ಲಿ ಪ್ರಯೋಜನವೂ ಇಲ್ಲ. ಇದಕ್ಕೊಂದು ದೃಷ್ಟಾಂತವನ್ನು ಹೇಳುವೆನು ಕೇಳು. ಹಿಂದೊಂದು ಸಲ ನಾವಿಲ್ಲಿಗೆ ಬಂದಿದ್ದಾಗ, “ ಜಾತಿಬಿಟ್ಟು ಜಾತಿಯಲ್ಲಿ ವಿವಾಹವಾಗಬಹುದೆ ’ ಎಂದು ನನ್ನನ್ನು ಕೇಳಿದ್ದಕ್ಕೆ ನಾನು ಆಗಬಹುದೆಂದು ಒಪ್ಪಿಕೊಂಡೆನು.

ನಾನು ಅನುಮತಿಯನ್ನು ಕೊಟ್ಟಿದ್ದರೂ ಅದರ ಫಲವೇನಾಯಿತೆಂಬುದನ್ನು ಇದುವರೆಗೂ ಕಾಣೆನು. ಆದುದರಿಂದ ಇಂತಹ ವಿಷಯಗಳನ್ನು ಬದಲಾಯಿಸಲು ಎರಡು ಸಮಯಗಳುಂಟು. ಅವು ಯಾವುವೆಂದರೆ, ಮೊದಲನೆಯದು, ಜನಗಳಲ್ಲಿ ಮುಖ್ಯರಾಗಿಯೂ, ಜನಸಮೂಹಕ್ಕೆ ಮುಖ್ಯಸ್ಥರಾಗಿಯೂ ಇರತಕ್ಕವರು ಒಂದಾಗಿ ಸೇರಿ ನಮ್ಮಲ್ಲಿ ಬಂದು ಕೇಳಿಕೊಂಡರೆ ಆಗ ನಾವು ಬದಲಾಯಿಸಬಹುದು. ಎರಡನೆಯದು, ಯಾರಾದರೂ ಅಂತಹ ಅನುಷ್ಠಾನ ವಿರೋಧವಾದ ಕಾರ್ಯವನ್ನು ಮಾಡಿ ಜನಸಮೂಹದವರಿಂದ ಬಹಿಷ್ಕೃತರಾದವರು ನಮ್ಮಲ್ಲಿಗೆ ಬಂದು ಶಾಸ್ತ್ರದಲ್ಲಿರತಕ್ಕ ಆಧಾರಗಳನ್ನು ತೋರಿಸಿ ಕೇಳಿಕೊಂಡದ್ದೇ ಆದರೆ, ಆಗ ನಾವು ನ್ಯಾಯಾಧಿಪತಿಗಳಂತಿದ್ದು ಆ ಪದ್ಧತಿಯನ್ನು ಸರಿಯಾದ ಕಾರಣದೊಂದಿಗೆ ತೀರ್ಮಾನಿಸಲು ಸಾಧ್ಯವಾಗುವುದು. ಈ ಎರಡು ಮಾರ್ಗಗಳೂ ಇಲ್ಲದೆ ನಾವು ಇಂತಹ ವಿಷಯಗಳಲ್ಲಿ ಪ್ರವೇಶಿಸುವುದು ಯುಕ್ತವಾಗಿ ಕಂಡು ಬರುವುದಿಲ್ಲ. ಹಾಗೆ ಪ್ರವೇಶಿಸುವುದರಿಂದ ಪ್ರಯೋಜನವೂ ಇಲ್ಲ. ಆದುದರಿಂದ ಇಂತಹ ಕಾರ್ಯಗಳಲ್ಲಿಯೂ ಬದಲಾವಣೆಯಲ್ಲಿಯೂ ಆಸಕ್ತಿಯುಳ್ಳವರು ಮೊದಲು ಜನಸಮೂಹದವರನ್ನು ಒಡಂಬಡಿಸಬೇಕು. ಅಥವಾ ತಾವೇ ಅನುಷ್ಠಾನ ವಿರೋಧವಾಗಿ ನಡೆಯಬೇಕು. ಈ ಎರಡು ಮಾರ್ಗಗಳಲ್ಲಿ ಮೊದಲನೆಯದೇ ಉತ್ತಮವು ಎಂದು ಅಪ್ಪಣೆಮಾಡಿದರು. "ಇದೇನಪ್ಪಾ" ಇಲ್ಲಿಯೂ ಹೀಗೆಯೇ ಆಯಿತಲ್ಲಾ ಎಂದು ಚಿಂತಿಸುತ್ತಾ ಸುಂದರೇಶನು ಆಚಾರ್ಯ ಸ್ವಾಮಿಗಳಿಂದ ಅಪ್ಪಣೆಯನ್ನು ಪಡೆದು ಹಿಂತಿರುಗಿದನು.

ಸುಂದರೇಶನಿಗೆ ರಜ ದಿನಗಳು ಇನ್ನು ಎರಡು ವಾರಗಳು ಮಾತ್ರವೇ ಇದ್ದುವು. ಅದರೊಳಗೆ ಕೆಲವು ಜನ ಪ್ರಮುಖರಾದ ವಿದ್ವಾಂಸರನ್ನು ಒಟ್ಟುಗೂಡಿಸಿ ಶಾಸ್ತ್ರಗಳೂ, ಆಚಾರ್ಯ ಸ್ವಾಮಿಗಳೂ ಹೇಳಿದ ವಿಷಯಗಳನ್ನು ಅವರುಗಳಿಗೆ ಅರಿಕೆಮಾಡಿ ಸಮೂಹದವರ ಅಭಿಪ್ರಾಯವೂ ಸಮ್ಮತವೂ ಪ್ರಾಮುಖ್ಯವೆಂತಲೂ, ಅದೊಂದುಮಾತ್ರವಿದ್ದರೆ ಲಕ್ಷೋಪಲಕ್ಷ ಸಂಖ್ಯೆಯುಳ್ಳ ಅರಿಯದಬಾಲಕಿಯರನ್ನು

ದುಃಖಸಾಗರದಿಂದಪಾರುಮಾಡಬಹುದೆಂತಲೂ, ಉಪನ್ಯಾಸಮಾಡು ವುದಾಗಿ ಉಪ್ಪೇಕ್ಷಿಸಿ ತಾನು ಇದ್ದ ಸ್ಥಳದಲ್ಲಿಯೇ ಮೊದಲು ಉಪ ನ್ಯಾಸಮಾಡಬೇಕೆಂದು ತೀರ್ಮಾನಿಸಿದನು. ತರುವಾಯ ದೇಶದೇಶ ಗಳನ್ನೆಲ್ಲಾ ಸಂಚರಿಸಿ ಆ ಸ್ಥಳಗಳಲ್ಲೆಲ್ಲಾ ಉಪನ್ಯಾಸ ಮಾಡಿ ಜನ ಸಮೂಹದ ಸಮ್ಮತಿಯನ್ನು ಪಡೆಯಬೇಕೆಂದು ಸಂಕಲ್ಪಮಾಡಿಕೊಂ ಡನು. ಒಂದು ಊರಿನಲ್ಲಿ ಉಪನ್ಯಾಸ ಮಾಡುವಾಗ, "ಮಹಾಪ್ರಭು ಗಳೇ! ವಿಧವಾ ವಿವಾಹವನ್ನು ನಡೆಸಲು ವೇದಶಾಸ್ತ್ರಗಳೂ ಶ್ರುತಿ ಸ್ಮೃತಿಗಳೂ ಅಡ್ಡಿ ಮಾಡಲಿಲ್ಲ. ಮಾಡಬಹುದೆಂದು ಅನುಮತಿ ಇತ್ತಿರುವವು. ಆದರೂ ಸಹಗಮನವು ಅತಿ ಶ್ರೇಷ್ಠವಾಗಿ ಭಾವಿಸಲ್ಪ ಟ್ಟಿದ್ದುದ್ದರಿಂದ ವಿಧವಾ ವಿವಾಹವನ್ನು ಅನೇಕರು ಅನುಷ್ಠಾನಕ್ಕೆತರ ಲಿಲ್ಲ. ಆದರೂ ವಿಧವಾ ವಿವಾಹವು ಅನುಷ್ಠಾನದಲ್ಲಿದ್ದಿತೆನ್ನುವುದಕ್ಕೆ ಅನೇಕ ಆಧಾರಗಳಿರುವವು. ತರುವಾಯ ಕೆಲವು ಗ್ರಂಥಕರ್ತರು ಸಹಗಮನವನ್ನೇ ಶ್ಲಾಘಿಸಿ ಇದನ್ನು ಖಂಡಿಸಿದರು. ಈಗಲೋ ಸಹ ಗಮನವೂ ಸರ್ಕಾರದವರನಿಬಂಧನೆಯಿಂದನಿರೋಧಿಸಲ್ಪಟ್ಟಿರುವುದು. ವೇದಮಾರ್ಗವು ಶಾಸ್ತ್ರೀಕವೆಂದು ಎಷ್ಟೇ ಹೇಳಿದರೂ ಜನರು ನಂಬ ಲಾರರು. ಸಹಗಮನ ಪದ್ಧತಿಯು ನಿಲ್ಲಿಸಲ್ಪಟ್ಟಿರುವಾಗ ನಮ್ಮಬಾಲ ವಿಧವೆಯರು ಏನು ತಾನೇ ಮಾಡಿಯಾರು ? ಅನುಷ್ಠಾನ ಒಂದೇ ತಪ್ಪ ಮಾಡುತ್ತಿರುವುದು. ಆ ಅನುಷ್ಠಾನವನ್ನು ತಕ್ಕವರುಕಾಲದೇಶವರ್ತ ಮಾನಗಳಿಗನುಸಾರವಾಗಿ ಬದಲಾಯಿಸಬಹುದೆಂದು ಅಧಿಕಾರವೂ ಇದೆಯಂತೆ. ಈ ರೀತಿಯಲ್ಲಿಯೇ ಶ್ರೀ ಶೃಂಗೇರಿ ಮಠದ ಜಗದ್ಗುರು ಗಳಾದ ಶ್ರೀಶಂಕರಾಚಾರ್ಯ ಸ್ವಾಮಿಗಳೂ ಕೆಲವುಪಂಡಿತವರ್ಯರೂ ಹೇಳಿದರು. ಹೀಗಿದ್ದೂ ಜನಸಮೂಹದವರು ಈ ಬದಲಾವಣೆಯು ಆವಶ್ಯಕವೆಂದು ತಮ್ಮನ್ನು ಪ್ರಾರ್ಥಿಸಿಕೊಂಡರೇ ಹಾಗೆಮಾ ಡುವರಂತೆ. ಆದುದರಿಂದ ಜಾಗ್ರತೆ ಎಲ್ಲರೂ ಒಂದುಗೂಡಿ ನಿಮ್ಮ ಮಕ್ಕಳನ್ನು ಈ ವಿಪತ್ತಿನಿಂದ ಉದ್ಧರಿಸಿರಿ. ಯಾವಾಗಲೂ ನಮ್ಮ ಅನುಕೂಲಕ್ಕೆತಕ್ಕಂತೆಯೇ ಶಾಸ್ತ್ರವನ್ನು ಬದಲಾಯಿಸಿಕೊಳ್ಳಬೇಕು. ಅದರಂತೆಯೇ ನಮ್ಮಹಿರಿಯರೂ ಮಾಡಿರುವರು. ಆರೀತಿ ಮಾಡದೆ "ಶಾಸ್ತ್ರ, ಶಾಸ್ತ್ರ" ಎಂದುಹೊಡೆದುಕೊಳ್ಳುತ್ತಿದ್ದರೆ, ಶಾಸ್ತ್ರವೂ ನಿಷ್ಫ

ಟವಾಗಿ, ದೇಶಿಯರೂ ನಾಶವಾಗಿ, ಸ್ವಾಧೀನವನ್ನೂ ಹೋಗಲಾಡಿಸಿಕೊಂಡು ಪರಾಧೀನರಾಗಿ ಬಾಳಬೇಕಾಗಿರುವುದು. ನಾನು ಖಂಡಿತವಾಗಿ ಹೇಳುತ್ತೇನೆಂದು ಸಿಟ್ಟುಮಾಡಿಕೊಳ್ಳಬೇಡಿ. ಇಲ್ಲನೋಡಿ, ಸರ್ವಶಾಸ್ತ್ರ ಸಮ್ಮತವಾದ ಸಹಗಮನವೂ ನಿಲ್ಲಿಸಲ್ಪಟ್ಟಿತು. 12 ವರ್ಷಗಳಿಗಿಂತ ಚಿಕ್ಕ ಕನ್ನೆಯರಿಗೆ ನಿಷೇಕ ಪ್ರಸ್ತ ಮಾಡಕೂಡದೆಂಬ ವಿಧಿಯನ್ನು ಜಾರಿಗೆ ತಂದರು. ಇದಕ್ಕಿಂತಲೂ ಬೇರೆ ಅವಮಾನವೇನು ? ಇನ್ನೂ ಪುನರ್ವಿವಾಹದಿಂದ ಉತ್ಪನ್ನರಾಗತಕ್ಕಂಥವರಿಗೆ ಕುಟುಂಬದ ಸ್ವತ್ತಿಗೆ ಅಧಿಕಾರವಿಲ್ಲವೆಂದು ಪರಾಶರರು ಮಾಡಿದ್ದ ನಿಬಂಧನೆಯನ್ನು ರದ್ದು ಮಾಡಿ, 1856 ನೆಯ ವರ್ಷದ 15 ನೇ ಆಕ್ಟಿನಂತೆ ಅವರಿಗೆ ಸರ್ವಾಧಿಕಾರವೂ ಉಂಟೆಂಬ ನಿಬಂಧನೆಯನ್ನೇರ್ಪಡಿಸಿಬಿಟ್ಟರು. ಎಲ್ಲಾ ನಿಬಂಧನೆಗಳೂ ಅವರವರ ಚಿತ್ತವೃತ್ತಿಗನುಸಾರವಾಗಿ ಬದಲಾಯಿಸಲ್ಪಟ್ಟರೂ ಇದೊಂದು ಮಾತ್ರ ಬದಲಾಯಿಸಲ್ಪಡಬಾರದೇಕೆ? ಇದೊಂದು ಬದಲಾವಣೆಯು ಮಾತ್ರ ಉಂಟಾದರೆ ಅನೇಕರ ಕಷ್ಟವೂ, ದುಃಖವೂ, ದಾಸತ್ವವೂ ನಿವಾರಣೆಯಾಗುವುದಲ್ಲವೇ ? ಆದುದರಿಂದ ಜಾಗ್ರತೆ ಎಚ್ಚರ ಹೊಂದಿ ತಕ್ಕರೀತಿಯಾಗಿ ಶಾಸ್ತ್ರವನ್ನು ಬದಲಾಯಿಸಿಕೊಂಡು ನಮ್ಮ ಹಿರಿಯರನ್ನು ಗೌರವಗೊಳಿಸಿ ಮುಂದಕ್ಕೆ ಬರುವ ಮಾರ್ಗವನ್ನು ಹುಡುಕಿರಿ. ಇದೊಂದು ವಿಷಯ ಅಂದರೆ, ವಿಧವಾ ವಿವಾಹದ ವಿಷಯವೊಂದನ್ನು ಬಿಟ್ಟು ಮಿಕ್ಕ ವಿಷಯಗಳಲ್ಲೆಲ್ಲಾ ನಾವು ಹಿಂದಿನವರಂತೆಯೇ ಇರುವೆವೋ ಎಂಬುದನ್ನು ಪ್ರತಿಯೊಬ್ಬರೂ ನೋಡಿಕೊಳ್ಳಿರಿ; ಆಲಸ್ಯಮಾಡಬೇಡಿ. ಲಕ್ಷೋಪಲಕ್ಷ ವಿಧವೆಯರ ಕಣ್ಣಿನಿಂದ ಧಾರಾಕಾರವಾಗಿ ಅಶ್ರುಪ್ರವಾಹವು ಸುರಿಯುತ್ತಿದ್ದರೂ ನಿಮಗಿನ್ನೂ ದಯೆಬರಲಿಲ್ಲವೇ ? ಅನೇಕ ಕನ್ಯಾವಿತಂತುಗಳು ದಾಸವೃತ್ತಿಯಲ್ಲಿದ್ದರೂ ನಿಮಗೆ ಈವಿಷಯವು ಮುಳ್ಳಿನಂತೆ ಸದಾ ಚುಚ್ಚುತ್ತಲಿಲ್ಲವೆ ? ಅವರುಗಳ ಕಷ್ಟವನ್ನು ಕಣ್ಣಾರ ಕಂಡೂ, ಕಿವಿಯಾರ ಕೇಳಿಯೂ ಇನ್ನೂ ನಿಮಗೆ ಕನಿಕರವುಂಟಾಗಲಿಲ್ಲವೇ ? ನಿಮಗೆ ಈ ವಿಷಯವನ್ನು ಅನುಷ್ಟಿಸಲು ಸರ್ವಶಕ್ತಿಯನ್ನೂ ಬುದ್ಧಿಯನ್ನೂ ಭಗವಂತನು ಕೊಡಲೆಂದು ಪ್ರಾರ್ಥಿಸುವೆನು'' ಎಂದು ಹೇಳಿದನು. ಮೇಲೆ ಹೇಳಿದಂತೆ ಅನೇಕಕಡೆ ಉಪನ್ಯಾಸ ಮಾಡಿಯೂ ಯಾರೂ ಈ

ವಿಷಯಕ್ಕೆ ಸಮ್ಮತಿಸದಿದ್ದುದರಿಂದ ಖಿನ್ನನಾಗಿ ತನ್ನ ಊರಿಗೆ ಬಂದು ಸೇರಿದನು.

ಶಚೀಂದ್ರನಿಗೆ ನಡೆದ ವಿಷಯಗಳನ್ನೆಲ್ಲಾ ಸವಿಸ್ತಾರವಾಗಿ ತಿಳಿಸಿದನು. ಅವನೂ ಈ ನಿಬಂಧನೆಯು ಮೆಯಿನ್ (Main) ಧೊರೆಯಿಂದ ರಚಿಸಲ್ಪಟ್ಟ ಹಿಂದೂ ಲಾ (Indian Penal Code) ವಿನಲ್ಲಿರುವುದಾಗಿ ಹೇಳಿ ಹಿಂದೂ ಲಾ 110, 111 ನೇ ಪುಟಗಳಲ್ಲಿರುವ ವಿಷಯವನ್ನು ಓದಿ ತೋರಿಸಿದನು.

ಈ ರೀತಿ ತಮ್ಮಿಂದಾದವರೆಗೂ ಪ್ರಯತ್ನಿಸಿ ಜನಸಮೂಹದ ಅನುಮತಿಯನ್ನು ಪಡೆದೇ ಈ ಕಾರ್ಯವನ್ನು ನೆರವೇರಿಸಬೇಕೆಂದು ಮಾಡಿಕೊಂಡಿದ್ದ ಸಂಕಲ್ಪವು ಈಡೇರದ್ದರಿಂದ ತಮ್ಮ ಸ್ವಾತಂತ್ರ್ಯಗಳನ್ನು ಸರ್ಕಾರದ ವಶಕ್ಕೊಪ್ಪಿಸಲು ಮನಸ್ಸಿಲ್ಲದವರಾಗಿದ್ದರೂ, ಬೇರೆ ಮಾರ್ಗವಿಲ್ಲದೆ ಹಾಗೆಮಾಡಲು ಸಮ್ಮತಿಸಿದರು. ಇಬ್ಬರೂ ಕಾಲವಿಳಂಬ ಮಾಡದೆ ಕಲ್ಕತ್ತೆಗೆ ಹೋಗಿ ಅಲ್ಲಿರತಕ್ಕ ಬ್ರಹ್ಮಸಮಾಜವನ್ನು ಸೇರಿ, ಅವರ ಮತವನ್ನಂಗೀಕರಿಸಿ ಇಂದಿರೆಯೂ ಸುಂದರೇಶನೂ ವಿವಾಹ ಮಾಡಿಕೊಂಡರು. ಪರಿಷ್ಕರಣದಲ್ಲಭಿರುಚಿಯುಳ್ಳ ಅನೇಕ ಶ್ರೀಮಂತರೂ ಪ್ರಭುಗಳೂ ವಿವಾಹಕ್ಕೆ ಕರೆಯಲ್ಪಟ್ಟಿದ್ದರು. ಶಚೀಂದ್ರನು ಶಾಸ್ತ್ರ ವಿಧಿಗನುಸಾರವಾಗಿ ಇಂದಿರೆಯನ್ನು ಸುಂದರೇಶನಿಗೆ ಧಾರೆಯೆರೆದು ಕೊಟ್ಟನು. ಬ್ರಹ್ಮವಿಧಿಗನುಸಾರವಾಗಿ ವಿವಾಹವು ನೆರವೇರಿಸಲ್ಪಟ್ಟಿತು. ನೆರೆದಿದ್ದವರು ಸುಂದರೇಶನ ಧೈರ್ಯವನ್ನು ಶಚೀಂದ್ರನ ಶ್ಲಾಘ್ಯವಾದ ಗುಣವನ್ನೂ ಹೊಗಳಿದರು. ಇಂದಿರೆಯ ಕಣ್ಣೀರು ಹರಿಯುವುದು ಅಂದಿಗೆ ನಿಂತಿತು. ವಿಧವಾವಸ್ಥೆಯ ಕಷ್ಟಗಳನ್ನು ತಾನೇ ಸ್ವತಃ ಅನುಭವಿಸಿದವಳಾದ್ದರಿಂದ ತನ್ನ ಸೋದರಿಯರ ಕಷ್ಟವೇ ತನ್ನ ಕಷ್ಟವೆಂದು ತಿಳಿದು ಅವರನ್ನು ಆದರಿಸಿ ಪುನಹ ವಿವಾಹಿತರಾಗಲು ಇಷ್ಟವುಳ್ಳವರಿಗೆ ಸುಂದರೇಶನೂ ಇಂದಿರೆಯೂ ತಮ್ಮ ಸ್ವಂತ ಖರ್ಚಿನಿಂದ ವಿವಾಹವನ್ನು ಮಾಡಿಸುತ್ತಿದ್ದರು. ಇವರ ಔದಾರ್ಯವನ್ನೂ, ಸದ್ಗುಣವನ್ನೂ, ಪರೋಪಕಾರ ಬುದ್ಧಿಯನ್ನು ಕೊಂಡಾಡದವರಿಲ್ಲ. ಇವರ ಮೇಲ್ಪಂಕ್ತಿಯು ಅನೇಕರಿಂದ ಅನು

ನಡಿಸಲ್ಪಟ್ಟಿತು. ಶಚೀಂದ್ರನ ಸೋದರೀವಾತ್ಸಲ್ಯವನ್ನು ಕೊಂಡಾಡದವರೇ ಇಲ್ಲ. ಈ ವಿವಾಹವಿಷಯವು ಸತೀಶನಿಗೆ ಕಾಲಕ್ರಮದಲ್ಲಿ ತಿಳಿದು, ಶಚೀಂದ್ರನಿಗೆ ತನ್ನ ಆಸ್ತಿಯಲ್ಲಿ ಒಂದು ಕಾಸನ್ನೂ ಕೊಡುವುದಿಲ್ಲವೆಂದು ಬರೆದನು. ಶಂಕರಿ, ಲೀಲೆಯೂ ವಿಧವಿಧವಾಗಿ ಪ್ರಸಂಗಮಾಡಲಾರಂಭಿಸಿದರು. ಶಚೀಂದ್ರನನ್ನು ಇನ್ನು ತನ್ನ ಮನೆಗೆ ಬರಕೂಡದೆಂದು ಬರೆದನು. ಇವನು ಯಾವುದನ್ನೂ ಲಕ್ಷ್ಯಮಾಡಲಿಲ್ಲ. ಈ ರೀತಿಯಾಗುವುದೆಂದು ಅವನಿಗೆ ಮೊದಲೇ ಗೊತ್ತಿದ್ದಿತು. ಶಚೀಂದ್ರನೂ ಸುಂದರೀಶನೂ ಅನ್ಯೋನ್ಯವಾಗಿದ್ದು, ಅನಾಥರ ಕಷ್ಟನಿವಾರಣೆಯೇ ತಮ್ಮ ಮುಖ್ಯಕರ್ತವ್ಯವೆಂದು ತಿಳಿದು ಅದರಂತೆ ನಡಯುತ್ತಿದ್ದರು. ಇವರಿದ್ದ ಕಡೆಗಳಲ್ಲೆಲ್ಲಾ ದೇವರಂತೆ ಪೂಜಿಸಲ್ಪಡುತ್ತಿದ್ದರು. ಅತಿಸುಖದಿಂದ ಸರ್ವರೂ ಕಾಲಕಳೆಯುತ್ತಿದ್ದರು.

ಸಂಪೂರ್ಣಂ.



# ಉಪಸಂಹಾರ.

---

**ವಾಚಕಮಹಾಶಯರೇ !**

ನಿರ್ಭಾಗ್ಯವನಿತೆಯನ್ನು ಪೂರ್ತಿಗೊಳಿಸಿದ್ದಾಯಿತು. ಇಂದಿರೆಯ ಸ್ಥಿತಿಯಿಂದ ಹಿಂದೂ ವಿಧವೆಯರ ಶೋಚನೀಯವಾದ ಸ್ಥಿತಿಯು ಎಷ್ಟರಮಟ್ಟಿಗಿರುವುದೆಂಬುದನ್ನು ಸರ್ವರೂ ಗ್ರಹಿಸಬಹುದು. ಇದಕ್ಕಿಂತಲೂ ಅಧಿಕಕಷ್ಟವನ್ನು ಅನೇಕ ನಿರ್ಭಾಗ್ಯರು ಅನುಭವಿಸುತ್ತಿರುವದನ್ನು ನಾನು ಕಣ್ಣಾರ ಕಂಡಿರುವೆನು. ಇಂಥಾ ನಿರ್ಭಾಗ್ಯರಿಗೆ ಯಾವ ಗತಿಯೂ ಇಲ್ಲವೇ ? ಜಾನ್‌ಸ್ಟ್ಯುಯರ್ಟ್‌ಮಿಲ್ (John Stuart Mill) ಎಂಬೊಬ್ಬ ಮಹಾಜ್ಞಾನಿಯು ಕಾಪಾಡಲು ತನಗೆ ಯಾವಶಕ್ತಿಯೂ ಇಲ್ಲದಿರುವಾಗ ಮಕ್ಕಳನ್ನು ಪಡೆಯುವುದು ದೊಡ್ಡ ಅಪರಾಧವೆಂದು ಹೇಳಿರುವನು. ಮಕ್ಕಳನ್ನುಹೆತ್ತು ಬಹುಪ್ರೀತಿಯಿಂದ ಅವರನ್ನು ಸಲಹಿ, ಕೊನೆಗೆ ಸಕಲ ಸುಖಗಳಿಂದಲೂ ವಂಚಿತರನ್ನಾಗಿಮಾಡುವುದು ನ್ಯಾಯವೇ ? ಈ ವಿಧವಾದ ನಿರ್ಭಾಗ್ಯರ ಪರಿತಾಪಸ್ಥಿತಿಯನ್ನು ನೋಡಿ ಕರಗದಿರುವ ಕಲ್ಲೆದೆಯವರ್ಯಾರಾದರೂ ಇರುವರೇ ? ಪುತ್ರಿಯನ್ನು ಪಡೆದು ಪ್ರಪಂಚವಿಂಥಾದ್ದೆಂದು ಅವಳರಿಯುವುದಕ್ಕೆ ಮುಂಚೆಯೇ ಕಣ್ಣಿಂದ ಎಂದೂ ಕಾಣದಂಥ ನಿರ್ಭಾಗ್ಯನೊಬ್ಬನಿಗೆ ಬಲಾತ್ಕಾರವಾಗಿ ವಿವಾಹದಿಂದ ಬಂಧಿಸಿ, ಅವಳಿಗಿಷ್ಟವಿದೆಯೋ ಇಲ್ಲವೋ ಎಂಬುದನ್ನು ಕೂಡ ವಿಚಾರಿಸದೆ, ಕೆಲಸವನ್ನು ನೆರವೇರಿಸುವರು. ಅವನು ವಯಸ್ಸಿನಲ್ಲಿ ಚಿಕ್ಕವನೋ, ಅವಿದ್ಯಾವಂತನೊ, ರೋಗಿಷ್ಟನೋ, ಕುರೂಪಿಯೋ, ಯಾವುದನ್ನು ವಿಚಾರಿಸತಕ್ಕ ಅವಶ್ಯಕವಿಲ್ಲ. ಈಚೀಚೆಗೆ ಈಗಲೋ, ಮರುಕ್ಷಣದಲ್ಲಿಯೋ ಯಮಸದನವನ್ನು ನೋಡಲು ತಯಾರಾಗಿರುವ ವೃದ್ಧರುಕೂಡ ನೊಮ್ಮಗಳೆಂದು ಹೇಳಬಹುದಾದ ಕನ್ಯೆಯರನ್ನು ಅವರ ಇಷ್ಟಕ್ಕೆ ವಿರೋಧವಾಗಿ ವರಿಸಿ ಕೊನೆಗೆ ಅವರ ತಲೆಗೆ ಕೆರಗಳೆಯುವಂತೆ ಮಾಡಿ ತಮ್ಮ ಕಾರ್ಯವನ್ನು ನೆರವೇರಿಸಿಕೊಂಡು ಮೃತ್ಯು ಸಾನಿಧ್ಯವನ್ನೈದುವರು.

ಸಂತೋಷ ಸಾಗರದಲ್ಲಿ ಮುಳುಗಿ, ಕೇವಲ ಬಾಲ್ಯಾವಸ್ಥೆಯಲ್ಲಿ ಮುಳುಗಿ ಪ್ರಪಂಚವೇ ಇಂತಹುದೆಂದು ತಿಳಿಯದ ವಯಸ್ಸಿನಲ್ಲಿ ವಿವಾಹವಮಾಡಿ ಕಾಲವಶಾತ್ ಪತಿಯು ಮರಣಹೊಂದಿದರೆ ಇಲ್ಲದ ವಿಕಾರರೂಪಗಳನ್ನವರಿಗೆ (ಹೇಳಲೂ ಕೂಡ ಬಾಯಿ ಬಾರದು) ಉಂಟುಮಾಡುವರು. ಯಾವ ಆಭರಣವನ್ನೂ ಧರಿಸಲು ಅವರಿಗೆ ಅಧಿಕಾರವಿಲ್ಲ. ದಿನಕ್ಕೆ ಒಂದು ಸಲದ ಮೇಲೆ ಆಹಾರವನ್ನು ತೆಗೆದುಕೊಳ್ಳದೆ ಉಪವಾಸವಮಾಡಿ ಸಾಯಬೇಕು. ಅವರೇ ಮನೆಗೆಲಸಗಳನ್ನೆಲ್ಲಾ ಮಾಡಬೇಕು. ಇಂಥವರನ್ನು ಬಾಯಿಗೆ ಬಂದಂತೆ ದೂಷಿಸಲೂ, ಕಷ್ಟಪಡಿಸಲೂ, ಸರ್ವರಿಗೂ ಸಂಪೂರ್ಣ ಸ್ವಾತಂತ್ರ್ಯವಿರುವದರಿಂದ ಉಡುವುದಕ್ಕೆ ಬಟ್ಟೆಯಿಲ್ಲದೆ, ತಿನ್ನುವುದಕ್ಕೆ ಅನ್ನವಿಲ್ಲದೆ, ಬೀದಿಗೆ ಬರಬಾರದೆಂಬ ನಿಷೇಧದಿಂದ ಇತರ ಮನುಷ್ಯರ ಮುಖವನ್ನು ನೋಡುವ ಪುಣ್ಯ ಕೂಡ ಇಲ್ಲದೆ ತಪಿಸುವ ನಿರ್ಭಾಗ್ಯರ ಸ್ಥಿತಿಯನ್ನು ನೆನಸಿಕೊಂಡರೇಸೆ ಮೈನಡುಗುವುದು. ಇಷ್ಟೊಂದು ಕಷ್ಟಗಳನ್ನೂ ಆ ನಿರ್ಭಾಗ್ಯರು ಎಷ್ಟು ಧೈರ್ಯದಿಂದ ಸಹಿಸಿಕೊಳ್ಳುವರೆನ್ನುವುದನ್ನು ವಾಚಕಮಹಾಶಯರೆ ಗ್ರಹಿಸಬೇಕು. ಆಹಾ! ಒಂದು ಜೀವವಿಲ್ಲದವಮಾತ್ರಕ್ಕೆ ಎಷ್ಟು ಕಷ್ಟವನ್ನನುಭವಿಸಬೇಕಾಗಿರುವುದು ? ಇಂಥಾ ಬಾಲ್ಯ ವಿಧವೆಯರನ್ನು ಪ್ರತಿದಿನವೂ ನೋಡುವವರೂ, ವಿಧವೆಯರಾದ ಸೋದರಿಮತ್ತು ಪುತ್ರಿಯರನ್ನು ಹೊಂದಿದವರೂ ಅವರ ಸ್ಥಿತಿಗಳನ್ನು ಚೆನ್ನಾಗಿ ಅರಿತಿರುವರಲ್ಲದೆ ಮಿಕ್ಕವರಿಗೆಷ್ಟು ಮಾತ್ರವೂ ಅನುಭವಕ್ಕೆ ಬರಲಾರದು. ಎಷ್ಟು ಜನ ತಾಯಿಯರು ತಮ್ಮ ಪ್ರಿಯಪುತ್ರಿಯರಿಗೆ ಒದಗಿದ ಈ ವಿಧವಾವದುರವಸ್ಥೆಯನ್ನು ನೋಡಿ ಸಹಿಸಲಾರದೆ ಪ್ರಾಣತ್ಯಾಗಮಾಡಿಲ್ಲ ! ಇಂಥವುಗಳನ್ನು ಪ್ರತಿನಿತ್ಯವು ನಾವು ಸಾವಿರಗಟ್ಲೆಯಾಗಿ ನೋಡುತ್ತಲೂ ಮತ್ತು ಕೇಳುತ್ತಲೂ ಇರುವೆವು. ಧರ್ಮಕ್ಕೂ, ದಾನಕ್ಕೂ ಪರೋಪಕಾರಬುದ್ಧಿಗೂ ಭಕ್ತಿಗೂ, ಪಾತಿವ್ರತ್ಯಕ್ಕೂ ತವರುಮನೆಯೆನಿಸಿರುವ ಈ ಆರ್ಯಾವರ್ತವು ಈ ನಿರ್ಭಾಗ್ಯರ ದುರವಸ್ಥೆಗೆ ಕಿವಿಗೊಡಬಾರದೇಕೆ? ಇದೇ ಧರ್ಮರಾಜ್ಯವೇ? ಇದೇ ಭೂತದಯೆಯೇ ? ಭರತಖಂಡದ ಮೊದಲನೇ ಕವಿಯೊಬ್ಬನು ದಂಪತಿಗಳಾದ ಎರಡು ಪಾರಿವಾಳಗಳಲ್ಲಿ ಗಂಡು ಪಾರಿವಾಳವನ್ನು ಒಬ್ಬ ಬೇಟೆಗಾರನು ಸಂಹರಿಸಲು ಆ ಹೆಣ್ಣು ಪಾರಿವಾ

ಳದಗೋಳನ್ನು ನೋಡಿ ಸಹಿಸುವುದು ತನಗೆ ಅಸಾಧ್ಯವಾಗಿರುವುದೆಂದು ಹೇಳಿದನು. ಕೇವಲ ಒಂದು ಸ್ತ್ರೀವ್ಯಕ್ತಿಯನ್ನು ಸೆರೆಯಿಂದ ಬಿಡಿಸಲು ಕೋತಿಯು ಬಹುಕಷ್ಟಪಟ್ಟಿತೆಂದು ನಾವು ರಾಮಾಯಣದಲ್ಲಿ ಓದಿರುವೆವು. ಅವುಗಳ ಪಾಠವನ್ನು ಮನುಷ್ಯರಾದ ನಾವು ಕಲಿಯಬಾರದೇಕೆ? ಈ ನಿರ್ಭಾಗ್ಯರ ಸ್ಥಿತಿಯನ್ನು ನೆನಸಿಕೊಂಡರೆ ಪಾಷಾಣ ಹೃದಯವೂ ಕರಗಿ ನೀರಾಗುವುದು. ಭಗವತ್ಪ್ರೇಮವು ನಮ್ಮಲ್ಲಿದ್ದರೆ, ದಯೆಯೂ, ಪರೋಪಕಾರ ಬುದ್ಧಿಯೂ ನಮ್ಮಲ್ಲಿದ್ದರೆ ಈ ನಿರ್ಭಾಗ್ಯರ ದುಃಸ್ಥಿತಿಯನ್ನು ಪರಿಹರಿಸಲು ಪ್ರಯತ್ನಿಸಬೇಕು. ಕ್ಷಾಮಪೀಡಿತರಾದವರಿಗೆ ಸಹಾಯಮಾಡಬೇಕೆಂತಲೂ, ಯುದ್ಧದಲ್ಲಿ ಹೊಡೆದಾಡುವವರಿಗೆ ಸಹಾಯಮಾಡಬೇಕೆಂತಲೂ ಅನಾಥಬಾಲರನ್ನುದ್ಧರಿಸಲಿಲ್ಲವೆಂತಲೂ ನಾವುಗಳು ಸರ್ಕಾರದವರನ್ನು ಪ್ರಾರ್ಥಿಸುತ್ತೇವೆ. ಹೀಗಿದ್ದಾಗ್ಯೂ ವಿಪತ್ತಿನಿಂದುದ್ಧಾರವಾಗದೆ ತಪಿಸುತ್ತಿರುವ ಬಾಲವಿಧವೆಯರಿಗೆ ಪ್ರತಿಕೂಲವಾಗಿ ನಿಂತಿರುವ ನಮ್ಮ ಸಂಘಗಳಿಗೆ ನಾವುಗಳು ಏನುಮಾಡಲೂ ಅಶಕ್ತರಾಗಿರುವೆವು. ಸಕಲ ವಿಧವಾದ ಧರ್ಮ, ಅರ್ಥ, ಕಾಮ, ಮೋಕ್ಷ ಮೊದಲಾದ ಸಾಧನಗಳಿಗೂ ಗೃಹವೇ ಮುಖ್ಯಸ್ಥಾನವು. ಆದುದರಿಂದಲೇ (Charity begins at home) ಧರ್ಮಕ್ಕೆ ಮೂಲಸ್ಥಾನವು ಗೃಹವೇ ಎಂದು ಹೇಳುವರು ಹೌದು. ಈ ಧರ್ಮವೇ ಪ್ರೀತಿಯೆನ್ನುವುದು. ನಮ್ಮ ಮನೆಯಲ್ಲಿ ವಿಧವೆಯರಿದ್ದರೆ ನಾವೇನನ್ನು ಮಾಡುತ್ತೇವೆ? ಅವರ ವಿಷಯದಲ್ಲಿ ಕೆಲವು ವೇಳೆಗಳಲ್ಲಿ ಇತರರಿಗೆ ದುಃಖವುಕೂಡ ಉಂಟಾಗುವುದಿಲ್ಲ. ಅವರಸನ್ಮೋರ್ನ್ನತಿಗೆ ಮಾರ್ಗವನ್ನು ಹುಡುಕುವುದಕ್ಕೆ ಬದಲಾಗಿ ಅವರ ಸರ್ವನಾಶಕ್ಕೆ ಉದ್ಯುಕ್ತರಾಗುತ್ತೇವೆ. ಸಂಘವಾದರೋ ವಿಧವೆಯರ ದುರವಸ್ಥೆಯನ್ನು ನೀಗಿಸಲು ಅಸಾಧ್ಯವಾಗಿದೆ. ಕ್ಷಾಮಪೀಡಿತರಾದ ನಿರ್ಭಾಗ್ಯರಲ್ಲಿರುವ ದಯೆಯಷ್ಟು ಅಲ್ಪದಯೆಯೂ ಈ ವಿಧವೆಯರ ವಿಷಯದಲ್ಲಿ ತೋರಿಸಲ್ಪಡದಿರುವುದು ಭಗವನ್ನಿಯಾಮಕವೆಂತಲೇ ಹೇಳಬೇಕಾಗಿರುವುದು. ಇದೇ ಭಗವಂತನ ಪ್ರತಿಫಲವು. ಸಾಮಾಜಿಕ ಪದ್ಧತಿಗಳೂ (Social customs) ಜಾತಿಪದ್ಧತಿಗಳೂ, ಪೂರ್ವಾಚಾರಗಳೂ ಈ ವಿಷಯಕ್ಕೆ ಪ್ರತಿಕೂಲವಾಗಿರುವುದರಿಂದ ಏನು ಮಾ

ಡುವುದಕ್ಕೂ, ಅಶಕ್ಯವಾಗಿರುವುದು. ಈ ಪೂರ್ವಪದ್ಧತಿಗಳು ಮಿಕ್ಕ ವಿಷಯಗಳಲ್ಲೆಲ್ಲಾ ಸ್ಥಿರಪಡದೆ ಈ ವಿಷಯದಲ್ಲಿ ಮಾತ್ರ ಸ್ಥಿರವಾಗಿ ನಿಂತಿರುವುದನ್ನು ನೋಡಿದರೆ ಇದೂವಿಧವೆಯರ ದುರದೃಷ್ಟವೆಂತಲೇ ಹೇಳಬೇಕಾಗಿರುವುದು.

ಈಚೀಚೆಗೆ ಅಲ್ಲಲ್ಲಿ ಕೆಲವು ಪುಣ್ಯಮೂರ್ತಿಗಳು ಅವತರಿಸಿಇವರನ್ನುದ್ಧರಿಸಲು ಕಂಕಣಬದ್ಧರಾಗಿರುವರನ್ನುವುದು ವಿಧವೆಯರ ಪುಣ್ಯವೆಂತಲೇ ಹೇಳಬೇಕು. ಈ ಬಾಲವಿಧವೆಯರ ಕಷ್ಟವು ಲೆಖ್ಖಿಸಲಸಾಧ್ಯವಾಗಿದ್ದರೂ ಶೀಘ್ರದಲ್ಲಿಯೇ ವಿಮೋಚನವಾಗುವುದೆಂದು ನಂಬಬಹುದಾಗಿದೆ. ಬೊಂಬಾಯಿಮತ್ತುಮದರಾಸ್ ಆಧಿಪತ್ಯಗಳಲ್ಲಿಯೂ, ಪಂಜಾಬ್ ಮತ್ತು ಇತರಕಡೆಗಳಲ್ಲಿಯೂ, ಜನರಿಗೆ ಈಗತಾನೇ ವಿಧವೆಯರ ಕಷ್ಟನಿಷ್ಠುರಗಳು ತಿಳಿದಂತೆ ಕಾಣುತ್ತದೆ. ಕೆಲವು ವರ್ಷಗಳ ಹಿಂದೆ ಜನರು ಈ ವಿಷಯದಲ್ಲಿ ವಿರೋಧಿಗಳಾಗಿದ್ದಷ್ಟು ಈಗ ಇರುವುದಿಲ್ಲ. ಕೆಲವು ಕಡೆಗಳಲ್ಲಿನ ಜನರು ಈ ವಿಷಯಕ್ಕೆ ವ್ಯತಿರಿಕ್ತವಾಗಿರುವರು. ಪ್ಲೇಗ್-ಯುದ್ಧ ಮೊದಲಾದವುಗಳು ಅವತರಿಸಿ ವಿಧವೆಯರ ಸಂಖ್ಯೆಯನ್ನು ಹೆಚ್ಚುಮಾಡುತ್ತಲಿದೆ. ಪ್ರತಿಯೊಂದು ಗೃಹದಲ್ಲಿಯೂ ಕನಿಷ್ಟಪಕ್ಷ ಇಬ್ಬರು ಮೂವರು ವಿಧವೆಯರಿರುವರು. ಇವರನ್ನುದ್ಧರಿಸಲು ಸರ್ವರೂ ಪ್ರಯತ್ನಿಸಬೇಕಾಗಿದೆ.

---